ಜಯಕರ್ನಾಟಕ ಗ್ರಂಥಮಾಲೆಯ ೨೦ನೆಯ ಪುಷ್ಪ

# ಮಲ್ಲಿಗೆದಂಡೆ

( ಮಧುರಚೆನ್ನರ ಮುನ್ನುಡಿಯೊಡನೆ )

ಸಂಗ್ರಾಹಕರು :

**ಶ್ರೀಮಾನ್ ಕಾಪಸೆ ರೇವಪ್ಪನವರು**

ಹಲಸಂಗಿ

ಮೊದಲ ಮುದ್ರಣ ]    [ ಬೆಲೆ ೧೨ ಆಣೆಗಳು

೧೯೩೫

ಕಾವ್ಯದೇವಿಯನ್ನು ಇನ್ನೂ ಹೆಚ್ಚು ಸುಂದರವಾಗಿ ಅಲಂಕರಿಸಬಹುದಾಗಿದೆ. ಆದುದರಿಂದ ರಸಿಕರಿಗೆ ವಾಚನೀಯವೂ ಸಾಹಿತಿಗಳಿಗೆ ಅವಶ್ಯ ಅಭ್ಯಸನೀಯವೂ ಆಗಿರುವುದೀ ಸಾಹಿತ್ಯ.

ಸಾಹಿತ್ಯವು ಜನಜೀವನದ ಪ್ರತಿಬಿಂಬವಷ್ಟೆ? ಬೆರಳೆಣಿಸುವಷ್ಟು ಪಟ್ಟಣಗಳನ್ನೂ ಸಂಸ್ಕೃತರೆನಿಸುವ ನಾಗರಿಕರನ್ನೂ ಬಿಟ್ಟರೆ, ನಮ್ಮ ನಾಡಿನ ಜನಜೀವನವು ನೂರರಲ್ಲಿ ತೊಂಬತ್ತು ಪಾಲು ಹಳ್ಳಿಗಳಲ್ಲಿದೆ. ನಮ್ಮ ನಾಡಿಗರ ಅನುದಿನದ ಆಚಾರ ವಿಚಾರಗಳನ್ನಾಗಲಿ, ಸಂಸ್ಕೃತಿಯನ್ನಾಗಲಿ, ಸಾಂಪ್ರದಾಯಿಕ ಇತಿಹಾಸವನ್ನಾಗಲಿ ಕಾಣಬೇಕಾದರೆ ಜನಪದ ಸಾಹಿತ್ಯಕ್ಕೆ ಮೊರೆ ಹೊಗಬೇಕಾಗುವುದು.

ನಮ್ಮ ಜನಸಾಮಾನ್ಯರ ಭಾವನೆಯ ಉಚ್ಚತೆ, ಶೀಲದ ಸ್ವಚ್ಛತೆ, ವಿಚಾರಗಳ ವಿದಗ್ಧತೆ ಇವು ಆ ಸಾಹಿತ್ಯದಲ್ಲಿ ಓದುಗರನ್ನು ಅಚ್ಚರಿಗೊಳಿಸುವಂತೆ ಒಡಮೂಡಿಲ್ಲವೆ? ಜನಜೀವನದ ಇತಿಹಾಸ ಸಂಶೋಧಕರಿಗೆ ಶಿಲಾಲೇಖ-ತಾಮ್ರಪಟಗಳಿಗಿಂತಲೂ ಹೆಚ್ಚಿನ ಸಹಾಯವು ಈ ಸಾಹಿತ್ಯದಿಂದ ದೊರೆಯದಿರಲಾರದು.

ಇದೀಗ ಈ ಸಾಹಿತ್ಯದ ಅಭ್ಯಾಸಕಾಲವು ಒದಗಿದೆ. ಅದಕ್ಕಾಗಿ ಜಯ ಕರ್ನಾಟಕ ಗ್ರಂಥಮಾಲೆಯಿಂದ ಗರತಿಯ ಹಾಡು, ಜೀವನ ಸಂಗೀತ, ಇದೀಗ ಮಲ್ಲಿಗೆದಂಡೆ—ಈ ಮೂರನ್ನು ಒದವಿಸಿದ್ದೇವೆ. ಕನ್ನಡಿಗರು ಇವುಗಳ ಲಾಭವನ್ನು ಪಡೆದುಕೊಳ್ಳುವರೆಂದು ಆಶಿಸುತ್ತೇವೆ.

ಈ ಪ್ರಕಟನೆಯೊಂದಿಗೆ ಗ್ರಂಥಮಾಲೆಯ ೩ನೆಯ ವರ್ಷವು ಮುಗಿಯಿತು. ಹೊಸ ವರುಷವನ್ನು ಒಂದು ಉತ್ತಮವಾದ ಕಾದಂಬರಿಯಿಂದ ಆರಂಭಿಸಬೇಕೆಂದು ವಿಚಾರವಿದೆ. ಸಹೃದಯರಾದ ಕನ್ನಡಿಗರು ಎಂದಿನಂತೆ ಪ್ರೋತ್ಸಾಹಿಸುವರೆಂದು ದೃಢವಿಶ್ವಾಸವಿದ್ದೇ ಇದೆ. ಈ ಸಂಗ್ರಹವನ್ನು ಸಮಗ್ರವಾಗಿ ಒದಗಿಸಿಕೊಟ್ಟ ಶ್ರೀ. ರೇವಪ್ಪನವರಿಗೂ ಅವರ ಗೆಳೆಯರಿಗೂ ವಂದನೆಗಳು.

ಧಾರವಾಡ
ಯುವಸಂವತ್ಸರ, ಚಂಪಾಷಷ್ಠಿ
೧-೧೨-೧೯೩೫

**ಬೆಳಗಾವಿ ರಾಮಚಂದ್ರರಾಯ**

# ಮುನ್ನುಡಿ

"ನುಡಿದದ್ದೇ ವೇದ, ನಡೆದದ್ದೇ ಯೋಗ" ಎನ್ನುವ ಸಹಜ ಸುಜ್ಞಾನಿಗಳ ಜೀವನದೊಳಗಿನ ತೀರ ಸಾಮಾನ್ಯ ಸಂಗತಿಗಳು ಕೂಡ ಉಳಿದವರಿಗೆ ತೀರ ಬೋಧಪ್ರದವಾಗಿರುವಂತೆ "ನುಡಿದದ್ದೆಲ್ಲ ಕವಿತೆ, ನಡೆದದ್ದೆಲ್ಲ ರಸ"ವಾಗಿ ಪರಿಣಮಿಸಿದ ರಸಪುರುಷರ ಅಂತರಂಗದಿಂದುಕ್ಕಿ ಬಂದ ಒಂದು ಚಿಕ್ಕ ನುಡಿಯು ಕೂಡ ಸರ್ವಸಾಮಾನ್ಯರಿಗೆ ಅರಗಳಿಗೆಯ ಮಟ್ಟಿಗಾದರೂ ಸ್ವರ್ಗದ ಸುಳುವನ್ನು ತೋರದಿರದು. ಅಂತಹ ಸ್ವರ್ಗದ ಮಕ್ಕಳು ಇನ್ನೆಂದಿಗೇ ಆಗಲಿ ನಮ್ಮ ನಾಡಿನಲ್ಲಿ ಉದಯಿಸಲಿಕ್ಕಿರುವರೆಂಬುದಕ್ಕೆ ಪೂರ್ವಚಿಹ್ನವೆಂಬಂತೆ, ಇದೀಗ ಅಂತಹ ಜೀವನಕ್ಕೆ ಆಶೆಪಟ್ಟು ಹರಿದಾಡುವವರು ಹಲಕೆಲವರು ಹುಟ್ಟಿರುವರಷ್ಟೆ! ವರಕವಿಗಳು ಉದಯಿಸುವ ಮುಂಚೆ ನಮ್ಮಂಥ ನರಕವಿಗಳ ಜಂಗುಳಿಯೇಳುವುದು ಅನಿವಾರ್ಯ. ಇವರ ಕಾವ್ಯಶಕ್ತಿಯು ಸಾಗುವಳಿಯಿಂದ ಬೆಳೆಯಬೇಕಾದದ್ದು. ಇವರ ಸಸಿಗೆ ಹೊರಗಿನ ನೀರೂ ಹವೆಯೂ ಕಾಲಕಾಲಕ್ಕೆ ಒದಗಬೇಕು. ಈ ದೃಷ್ಟಿಯಿಂದ ಸಂಗ್ರಹಿಸಿದ ಪ್ರಸ್ತುತಗೀತಗುಚ್ಛವು ನವ್ಯ ಕಾವ್ಯಕುಮಾರಿಯ ಕಳೆಯನ್ನು ಹೆಚ್ಚಿಸುವುದಕ್ಕೆಂದು ಅವಳಿಗೆ ಕಟ್ಟಿದ "**ಮಲ್ಲಿಗೆ ದಂಡೆ**" ಯಾಗಿದೆ.

ಜನಪದ ಸಾಹಿತ್ಯದ ಬೆಲೆಯನ್ನು ನಾನಿಲ್ಲಿ ಹೊಸದಾಗಿ ನಿರ್ಣಯಿಸುವ ಗೊಡವೆಗೇನೂ ಹೋಗಲಾರೆ. ಏಕೆಂದರೆ ಗೆಳೆಯ ಬೇಂದ್ರೆಯವರು 'ಗರತಿಯ ಹಾಡಿ'ನ ಪ್ರಸ್ತಾವನೆಯಲ್ಲಿ ಆ ಮಾತನ್ನು ವಿವರವಾಗಿ ಪ್ರತಿಪಾದಿಸಿದ್ದಾರೆ. ಇದೀಗ ನನ್ನ ಚಿತ್ತಕ್ಕೆ ಅಂಟಿಕೊಂಡಿರುವ ಒಗಟಗಳು ಎರಡು. ಇವೆರಡರಲ್ಲಿ ಮೊದಲನೆಯದು '**ಕಾವ್ಯದ ಉಗಮ**'; ಎರಡನೆಯದು '**ಕಾವ್ಯದ ಲಕ್ಷಣ**'. ಸದ್ಯಕ್ಕೆ ಕವನಪ್ರವೃತ್ತಿಯೇನೋ ಬಹಳ ಜನರಲ್ಲಿ ಕಾಣುತ್ತಿದೆ

ಆದರೆ ಅದರ ಸೆಲೆಯು ನಮಗೆ ಇನ್ನೂ ಸರಿಯಾಗಿ ಸಿಕ್ಕಿಲ್ಲವೆಂದೇ ಹೇಳಬೇಕು. ಅಲ್ಲದೆ ಕವಿತೆ ಬರೆಯುವ ಉಬ್ಬು ಕಾವ್ಯಸುಂದರಿಯ ರೂಪಲಾವಣ್ಯವನ್ನು ಇನ್ನೂ ತಕ್ಕಷ್ಟು ಕಂಡಿಲ್ಲವೆಂದೇ ಹೇಳಬೇಕು. ಹದಿನಾರು ವರುಷಗಳ ಹಿಂದೆ ‘ **ಪ್ರಭಾತ** ’ ಸಮಯದಲ್ಲಿ ಛಂದಸ್ಸೊಂದೇ ಕವಿತೆಯ ಮುಖ್ಯಲಕ್ಷಣವಾಗಿ ಇದ್ದದ್ದು ಹಾಗೆ ಒಂದು ಪಟ್ಟ ಕಳೆದ ಮೇಲೆ ಈ ನಾಲ್ಕಾರು ವರುಷಗಳಲ್ಲಿ ಭಾವವು ಕಾವ್ಯದ ಜೀವವೆಂಬ ವ್ಯಾಖ್ಯೆಗೆ ಬಂದುಮುಟ್ಟಿದೆ. ಆದರೆ ಈ ಮಾತೂ ಕೂಡ ತಕ್ಕಷ್ಟು ಸ್ಪಷ್ಟವಲ್ಲವೆಂದೇ ಎನ್ನಬೇಕು.

ಇದೀಗ ನಾನು ಮಾತನಾಡುತ್ತಿರುವುದೆಲ್ಲಾ ಒಂದು ಗ್ರಹಿಕೆಯಿಂದ. ಅದೇನೆಂದರೆ—ಎಲ್ಲ ವಿದ್ಯೆಗಳಂತೆ ಕಾವ್ಯಕಲೆಯೂ ಒಂದು ವಿದ್ಯೆ, ಅದನ್ನು ವ್ಯಾಸಂಗ ಮಾಡಿ ಅದರಲ್ಲಿ ತಜ್ಞತೆಯನ್ನು ಗಳಿಸಬಹುದು. ವರಕವಿಗಳ ಮಾತನ್ನು ಒತ್ತಟ್ಟಿಗಿಟ್ಟರೆ ಪ್ರಯತ್ನಸಿದ್ಧರಾದ ನಮ್ಮಂಥ ನರಕವಿಗಳ ಮಟ್ಟಿಗಾದರೂ ಈ ಮಾತು ತುಂಬಾ ದಿಟವಾಗಿದೆಯೆಂದು ನನ್ನ ಭಾವನೆ. ಕಾವ್ಯರತ್ನವನ್ನು ಯಾವ ಗಣಿಯಲ್ಲಿ ಅರಸಬೇಕು? ಮತ್ತು ಅದನ್ನು ಗುರುತಿಸುವುದಕ್ಕೆ ಕುರುಹುಗಳಾವವು? —ಎಂಬೆರಡು ಮಾತುಗಳು ಸರಿಯಾಗಿ ತಿಳಿದಲ್ಲದೆ ನಮ್ಮ ವ್ಯವಸಾಯವು ಎಂದಿಗೂ ಊರ್ಜಿತದಶೆಗೆ ಬಾರದು. ನಮಗೆ ಬೇಕಾಗಿರುವ ಮೇಲ್ಕಾಣಿಸಿದ ಎರಡು ಮಾತುಗಳ ಜ್ಞಾನವು ನಮಗಾಗಬೇಕಾದರೆ ಅದಕ್ಕೆ ಎರಡೇ ಮಾರ್ಗಗಳುಂಟು. ಜಗತ್ತಿನ ಪುರಾತನ ನೂತನ ಮಹಾಕವಿಗಳ ಕೃತಿಗಳನ್ನು ಪರಿಶೀಲಿಸುವುದೊಂದು; ಮತ್ತು ಕವಿಗಳೆಂದೆನಿಸಿಕೊಳ್ಳುವ ಹಂಬಲದ ಸೋಂಕು ಎಳ್ಳಷ್ಟೂ ಇಲ್ಲದ ಅಶಿಕ್ಷಿತ ಪುರಾತನರ ಜನಪದ ಸಾಹಿತ್ಯವನ್ನು ಸೋಸಿ ನೋಡುವುದು ಇನ್ನೊಂದು. ಒಂದು ಕವಿಗಳ ಕವಿತೆ ಇನ್ನೊಂದು ಕವಿಗಳಲ್ಲದವರ ಕವಿತೆ ಕವಿಗಳಲ್ಲದವರಲ್ಲಿಯೂ ಜೀವನದಲ್ಲಿ ಒಮ್ಮೊಮ್ಮೆ ರಸನಿಮಿಷಗಳು ಬಂದಾಗ ಕಾವ್ಯೋದ್ಗಾರಗಳು ಹೊರಹೊಮ್ಮಬಲ್ಲವು. ಬೌದ್ಧಿಕ ಸಂಘರ್ಷಣವಿಲ್ಲದ ಇಂಥ ಪುರಾತನ ಗ್ರಾಮ್ಯಗೀತಗಳ ಅನುಶೀಲನದಿಂದ ಕಾವ್ಯವಿಷಯಕವಾಗಿರುವ ಒಗಟುಗಳು ಒಡೆಯುವ ಸಂಭವವು ಹೆಚ್ಚಿಗೆ ಇದೆ

ಒಮ್ಮೆ ಗೆಳೆಯ ಬೇಂದ್ರೆಯವರೂ ನಾನೂ ಕೂಡಿಕೊಂಡು ನಮ್ಮ

ಪ್ರ

ಹಳ್ಳಿಯಲ್ಲಿಯೇ ಕುರುಬರ ಬೀರನ ಹಾಡನ್ನು ಕೇಳುತ್ತಿರುವಾಗ ಆ ಹಾಡಿನಲ್ಲಿ ನೀರಿಗೆ ನಡೆದ ಬಾಲೆಯೊಬ್ಬಳ ವರ್ಣನೆ ಬರಲು ನನ್ನನ್ನು ಆ ವರ್ಣನ ರೀತಿಯು ಬಹಳ ಅಗಾಧಗೊಳಿಸಿಬಿಟ್ಟಿತು. ಪೂರ್ವಕಾಲದ ಕುರುಬರು ಇಂತಹ ಹೆಣ್ಣನ್ನು ಎಲ್ಲಿ ಕಂಡಿದ್ದಾರು? ಕಲ್ಪನೆಯು ಆಂತರಿಕವಾದ ಒಂದು ಸತ್ಯ ಸಾಮ್ರಾಜ್ಯಕ್ಕೆ ಸಂಬಂಧಿಸಿದ್ದಾಗಿರಬೇಕೇನು? ಅಲ್ಲಿ ಕಂಡ ಅಪ್ಸರಕನ್ನಿಕೆಯು ಇಲ್ಲಿ ಹಾಡಿನೊಳಗಿನ ಹೆಣ್ಣಾಗಿರಬೇಕೇನು? ಈ ಮಾತು ನನ್ನ ಅಂತರಂಗ ದಲ್ಲಿ ಅತಿಶಯವಾಗಿ ದೃಢಪಟ್ಟಿತು. ಆವಾಗಲೇ ನನ್ನ ಈ ಒಳ ಅನಿಸಿಕೆ ಯನ್ನು ಗೆ. ಬೇಂದ್ರೆಯವರಿಗೆ ತಿಳಿಸಿದೆನು. ಅಲ್ಲದೆ ಅಷ್ಟರಲ್ಲಿ ಏ. ಈ. ಯವರ ಗ್ರಂಥಗಳಲ್ಲಿ ಈ ವಿಷಯಕ್ಕೆ ಇದೇ ಅಭಿಪ್ರಾಯವಿರುವುದಾಗಿಯೂ ಲಕ್ಷ್ಯಕ್ಕೆ ಬಂತು. ಆದರೆ ಆಗ ಆ ಪುಸ್ತಕವು ಬೇಗನೆ ನನ್ನ ಕೈಗೆ ಲಭಿಸ ದಷ್ಟು ದೂರಗತವಾಗಿದ್ದಿತು. ಮುಂದೆ ಅದನ್ನು ದೊರಕಿಸುವುದಕ್ಕೆ ಬೇಕಾದ ಕಾಲಾವಧಿಯೊಳಗಾಗಿ ನನಗೆ ಮತ್ತೆ ಎರಡು ಪ್ರಸಂಗಗಳಲ್ಲಿ ಮೇಲ್ಕಂಡ ಮಾತು ಅನುಭವಕ್ಕೆ ಬಂದಿತು. ಒಮ್ಮೆ ಪುಣೆಯಲ್ಲಿ ಬೇಂದ್ರೆಯವರೊಡನೆ ಅತ್ಯಂತ ತಲ್ಲೀನತೆಯಿಂದ ಅಧ್ಯಾತ್ಮಚರ್ಚೆ ನಡೆದಾಗ. ಇನ್ನೊಮ್ಮೆ ಈ ಪ್ರಸ್ತುತ ಕವನಸಂಗ್ರಹದೊಳಗಿನ 'ಹಣ್ಣ ಬಂದಾವ ಹಣ್ಣ' ಎಂಬ ಹಾಡನ್ನು ಒಬ್ಬ ಹೆಣ್ಣುಮಗಳು ಅತ್ಯಂತ ಸುಸ್ವರದಿಂದ ಹಾಡುವಾಗ. ಈ ಮೂರು ಪ್ರಸಂಗಗಳಲ್ಲಿ ಮೊದಲನೆಯದು ಕವಿಕಲ್ಪನೆಗೂ ಎರಡನೆಯದು ಶುದ್ಧತರ್ಕಕ್ಕೂ ಮೂರನೆಯದು ರಾಗತತ್ವಕ್ಕೂ ಸಂಬಂಧಿಸಿದವುಗಳಾಗಿವೆ. ಇವೆಲ್ಲವುಗಳಿಗೂ ನಮ್ಮ ಒಳಗಿನ ಯಾವುದೋ ಒಂದು ಸತ್ಯರಾಜ್ಯದ ನಿಕಟ ಸಂಬಂಧವಿದೆಯೆಂದು ನನಗೆ ಘನವಾಗಿ ಎನಿಸಿತು.

ಇತ್ತೀಚೆಗೆ ಏ. ಈ. ಯವರ **ಕ್ಯಾಂಡಲ್ ಆಫ್ ವ್ಹಿಜನ್** ಎಂಬ ಪುಸ್ತಕವು—ದೂರಗತವಾದದ್ದು—ಪುನಃ ನನ್ನ ಕೈಗೆ ಬಂತು. ಅದರಲ್ಲಿ ಅವರ ಈ ಮುಂದಿನ ವಾಕ್ಯವು ಕಣ್ಣಿಗೆ ಬಿತ್ತು.

"I am convinced that all poetry is, as Emerson said, first written in the heavens, that [illegible] deeper than appears in normal life......"

" ಇಮರ್ಸನ್ನರು ಹೇಳಿದಂತೆ ನನಗೂ ಮನವರಿಕೆಯಾದದ್ದೇನೆಂದರೆ—ಸಮಸ್ತ ಕವಿತೆಯು ಮೊದಲಿಗೆ ಸ್ವರ್ಗದಲ್ಲಿ ಬರೆಯಲ್ಪಟ್ಟಿರುತ್ತದೆ. ಸಹಜ ಜೀವನದಲ್ಲಿ ಕಾಣಿಸಿಕೊಳ್ಳುವುದಕ್ಕಿಂತ ಆಳದಲ್ಲಿರುವ ಆತ್ಮವು ಅದನ್ನು ಗ್ರಹಿಸಬಲ್ಲದು. "

ಏ. ಈ. ಯವರು ತಮ್ಮ ಅನುಭವವನ್ನು ಹೇಳಿದ್ದಲ್ಲದೆ ಅದಕ್ಕೆ ಇಮರ್ಸನ್ನರ ಸಾಕ್ಷಿಯೊಂದನ್ನು ಬೇರೆ ತೋರಿಸಿಕೊಟ್ಟರು. ಒಟ್ಟಾರೆ ನನ್ನ ಅನಿಸಿಕೆಗೆ ಹೀಗೆ ದ್ವಿಗುಣಿತ ಬಲವು ಲಭಿಸಿದಂತಾಯಿತು.

ಸತ್ಯಮಯವಾದ ಸೌಂದರ್ಯಮಯವಾದ ಶುಭಮಯವಾದ ಆ ಒಳಗಿನ ರಾಜ್ಯಕ್ಕೆ—ಏ. ಈ. ಯವರು " ಬಹುವರ್ಣಗಳ ದೇಶ" ವೆಂದು ( ಮೆನಿಕಲರ್ಡ್ ಲ್ಯಾಂಡ್) ಹೆಸರಿಟ್ಟಿದ್ದಾರೆ. ಆ ರಾಜ್ಯದ ಬಗೆಗೆ ತಾವು ಕಂಡ ಕಣಸುಗಳನ್ನು ಒಂದೆಡೆಯಲ್ಲಿ ಹೇಳಿದ್ದು ಹೇಗೆಂದರೆ—

" Some times lying on the hillside with the eyes of the body shut as in sleep, I could see valleys and hills, lustrous as a jewel, where all was self-shining, the colours brighter and purer, yet making a softer harmony together than the colours of the world I know There too, in that land, I saw shining folk They were, I believe, those who in the ancient world gave birth to legends of nymph and dryad Their perfectness was like the perfectness of a flower. "

" ಆಗಾಗ್ಗೆ ನಾನು ಗುಡ್ಡದ ಒರೆಯಲ್ಲಿ ನಿದ್ರಿತನಂತೆ ಹೊರಗಣ್ಣುಗಳನ್ನು ಮುಚ್ಚಿಕೊಂಡು ಬಿದ್ದುಕೊಂಡಿರುವಾಗ ನನಗೆ ರತ್ನದಂತೆ ಪ್ರಕಾಶಿಸುವ ಕಂದರಗಳೂ ಗಿರಿಶಿಖರಗಳೂ ಕಂಗೊಳಿಸುತ್ತಿದ್ದವು. ಅವು ಸ್ವಯಂಪ್ರಕಾಶಿತವಾಗಿರುತ್ತಿದ್ದವು. ಅವುಗಳ ಬಣ್ಣಗಳು ಪ್ರಭಾಮಯವಾಗಿಯೂ ನಿರ್ಮಲವಾಗಿಯೂ ಇರುತ್ತಿದ್ದವು. ನನಗೆ ಗೊತ್ತಿರುವ ಜಗತ್ತಿನ ಬಣ್ಣಗಳಿಗಿಂತ ಅವುಗಳಲ್ಲಿ ಕೋಮಲ ಸಾಮರಸ್ಯವು ಹೆಚ್ಚಾಗಿ ಇದ್ದಿತು. ಆ ನಾಡಿನಲ್ಲಿ ನಾನು ಥಳಥಳಿಸುವ ಜನರನ್ನು ಕೂಡ ಕಾಣುತ್ತಿದ್ದೆನು. ಪೂರ್ವಕಾಲದ ಯಕ್ಷಿಣಿಯರ ಕಥೆಗಳು ಹುಟ್ಟುವುದಕ್ಕೆ ಇವರೇ ಕಾರಣರಾದರೆಂದು ನನ್ನ ನಂಬುಗೆ. ಅವರ ಪರಿಪೂರ್ಣತೆಯು ಹೂವುಗಳ ಪರಿಪೂರ್ಣತೆಗೆ ಸದೃಶವಾದದ್ದು."

ಈ ಜಗತ್ತಿನ ಸಂಗತಿಗಳು ನಮ್ಮ ಚಿತ್ತಕ್ಕೆ ಸ್ಪರ್ಶಿಸಲು ಭಾವಗಳೇಳುವವು. ಆದರೆ ಆ ಭಾವಗಳಿಗೆ ತಕ್ಕ ಕಲ್ಪನಾಕವಚವು ಒಳಗಿನ ಬಹು

ವರ್ಣಗಳ ದೇಶದಿಂದ ಲಭಿಸುವುದು. ಇವೆರಡರ ಸಮ್ಮಿಲನವೇ ಕವಿತೆ. ನಮ್ಮ ಚಿತ್ತಕ್ಷೇತ್ರವು ಸುಂದರವೂ ನಿರ್ಮಲವೂ ಆದ ಹಾಗೆಲ್ಲ ನಮ್ಮಲ್ಲಿ ಸತ್ಯ ಕವಿತೆಯ ಆವಿರ್ಭಾವಕ್ಕೆ ಆಸ್ಪದವಾಗುವುದು. ಸೃಷ್ಟಿಜನನಿಯ ಇದಿರಿಗೆ ಸರಳವಾದ ಶಿಶುಬುದ್ಧಿಯಿಂದ ನಾವು ಹರಿದಾಡಬಲ್ಲೆವಾದರೆ, ಆಗ ನಾವು ಕಾವ್ಯದೇವಿಯ ಕೃಪೆಗೆ ಪಾತ್ರರಾಗಬಲ್ಲೆವು. ಇದೀಗ ಸಂಗ್ರಹಿಸಿರುವ ತಿಳಿ ಹೃದಯದ ಹೆಣ್ಣುಮಕ್ಕಳ ಪುರಾತನ ಕೃತಿಗಳ ಸಂಗ್ರಹವು ನಮ್ಮನ್ನು ಈ ದಾರಿಯಲ್ಲಿ ಮುಂದುವರಿಸದಿರಲಾರದೆಂದು ನನ್ನ ಶ್ರದ್ಧೆ.

ಇನ್ನು ಸದ್ಯದ ಪುಸ್ತಕದ ಬಾಹ್ಯಾಂಗವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವೆನು. ಪ್ರಸ್ತಾವನೆಯಲ್ಲಿ ಹೇಳಬೇಕಾಗಿರುವ ವಿಷಯದ ಬಹುಭಾಗವನ್ನು ಕೊನೆಟಿಪ್ಪಣಿಯ ಪ್ರವೇಶಿಕೆಗಳಲ್ಲಿ ಅಲ್ಲಲ್ಲಿಯೇ ಹೇಳಿ ಮುಗಿಸಿದೆ. ಆದುದರಿಂದ ವಾಚಕರು ಟಿಪ್ಪಣಿಯ ಪುಟಗಳನ್ನು ಅಲಕ್ಷಿಸ ಬಾರದಾಗಿ ಬಿನ್ನೈಸುವೆ.

ಹೆಣ್ಣುಮಕ್ಕಳ ಈ ಹಾಡುಗಳಲ್ಲಿ ತ್ರಿಪದಿಗೆ ಸಂಬಂಧಿಸಿರುವವುಗಳೇ ತೀರ ಹೆಚ್ಚು. ಕೆಲವೇ ವೃತ್ತಗಳು ಭಾವಕ್ಕೆ ತಕ್ಕಂತೆ ಬೇರೆ ಬೇರೆ ವಿವಿಧ ಮಟ್ಟುಗಳಿಂದ ಹಾಡಲ್ಪಡುವುದನ್ನು ಬಗೆದರೆ ಸಮಗೆ ಏಕವೇವ ಪರಮಾತ್ಮನ ಅನಂತಲೀಲೆಯೇ ಇಲ್ಲಿ ನೆನಪಾಗುವುದು. ಈ ಹಾಡುಗಳನ್ನು ಪ್ರತ್ಯಕ್ಷವಾಗಿ ಅವುಗಳ ನೆಲೆಯರಿತ ಹೆಣ್ಣುಮಕ್ಕಳ ಬಾಯಿಂದ ಹಾಡಿಸಿ ಕೇಳಿದರೆ ವಾಚ ಕರಿಗೆ ಈ ಮಾತಿನ ಮನವರಿಕೆಯಾಗಿ ಅತ್ಯಾಶ್ಚರ್ಯವಾಗದಿರದು. ದೇವತಾ ಸ್ತುತಿಯ ಹಾಡುಗಳು ಶುದ್ಧರಗಳೆಯ ವೃತ್ತಗಳಾಗಿರುವುದನ್ನು ನೆನೆದರೆ ಅತ್ಯ ಗಾಧವೆನಿಸುವುದು. ದ್ರೌಪದಿಯ ಹಾಡು ಭೋಗಷಟ್ಪದಿಯಾಗಿರುವುದನ್ನು ಬಗೆದರೆ ಹೆಣ್ಣುಮಕ್ಕಳ ಹಾಡುಗಳ ಸಂಶೋಧನದ ಮಹತ್ವವು ಸ್ಪಷ್ಟವಾಗಿ ವಿದಿತವಾಗುವಂತಿದೆ.

ಇನ್ನು ಈ ಹಾಡುಗಳ ಭಾಷೆ. ಕೇವಲ ಇದ್ದಕ್ಕಿದ್ದಂತೆ ಗ್ರಾಮ್ಯ ವಾಗಿಯೇ ಅದನ್ನು ಇಡಬೇಕೆಂದು ಕೆಲವರ ಅಭಿಪ್ರಾಯ. ತುಸುಮಟ್ಟಿಗೆ ಸಂಸ್ಕರಿಸಿ ಗ್ರಾಂಥಿಕ ಸ್ವರೂಪಕ್ಕೆ ತರಬೇಕೆಂದು ಇನ್ನು ಕೆಲವರ ಅಭಿಪ್ರಾಯ. ಆದರೆ ಇವೆರಡೂ ಮಾತುಗಳು ಈ ಪುಸ್ತಕದಲ್ಲಿ ಸರಿಯಾಗಿ ಸಾಧಿಸಲಿಲ್ಲ.

ಕೆಲವು ಹಾಡುಗಳು ಹಾಗೂ ಇವೆ. ಇನ್ನು ಕೆಲವು ಹೀಗೂ ಇಡಲ್ಪಟ್ಟಿವೆ. ಮುಂದಿನವರು ಈ ಕೆಲಸವನ್ನು ತಕ್ಕಂತೆ ಸರಿಪಡಿಸಿಕೊಳ್ಳಲಿ.

ಈ ಹಾಡುಗಳಲ್ಲಿ ಅಕ್ಷರಗಳನ್ನು ಎಳೆದೆಳೆದು ಉಚ್ಚರಿಸಿ ಗಣಪೂರ್ತಿಗೊಳಿಸುವ ರೂಢಿಯುಂಟು. ಆಮೇರೆಗೆ ಅಂಥಲ್ಲಿ ಅವಗ್ರಹ ಚಿಹ್ನದಿಂದ ಸೂಚಿಸಲಾಗಿದೆ. ಅಲ್ಲದೆ ಕೆಲಕೆಲವು ಕಡೆಯಲ್ಲಿ ಒಂದು ಚರಣದಲ್ಲಿರಬೇಕಾದದ್ದಕ್ಕಿಂತ ಹೆಚ್ಚು ಇಲ್ಲವೆ ಕಡಿಮೆ ಗಣಗಳಿರುವುದುಂಟು. ಆದರೆ ಇಂಥ ಸಂದರ್ಭಗಳು ಬಹಳ ಕಡಿಮೆ.

ಹಿಂದೆ ' ಗರತಿಯ ಹಾಡ 'ನ್ನು ಸಂಗ್ರಹಿಸಿದವರಲ್ಲೊಬ್ಬರಾದ ಗೆಳೆಯ ಕಾಪಸೆ ರೇವಪ್ಪನವರು ಈ ಸಾರೆ ಎರಡು ಮೂರು ತಿಂಗಳುಗಟ್ಟಲೆ ಶ್ರಮಪಟ್ಟು ಈ " **ಮಲ್ಲಿಗೆ ದಂಡೆ** " ಯನ್ನು ಹೆಣೆದಿರುವರು. ಕನ್ನಡ ನಾಡು ಅವರ ಈ ಶ್ರಮವನ್ನು ಸಾರ್ಥಕಗೊಳಿಸದಿರಲಾರದೆಂದು ನಾನು ನಂಬಿರುವೆನು.

ಹಲಸಂಗಿ
೧೨-೫-೧೯೩೫

**ಮಧುರಚೆನ್ನ**



# ಪರಿವಿಡಿ

# ಗಣಪತಿಯ ಸ್ತೋತ್ರ



ಗಂಧ ಕಸ್ತೂರಿ ಪುಸಗಽ |
ಗೌರವ್ವನ | ಕಂದಗ ಧರಿಸಿದರಽ |
ಅಂದದ ಬಿಃಎಲಿ ಅಡಕಿ ಕಾಚವು ಸುಣ್ಣ |
ಮುಂದ ಪಾಡಚಿನಿಟ್ಟು ಪುಲ್ಲಿಽಗಿ ಮಳಿಗರೆದ |
ಮತಿಯ ಪಾಲಿಸೊ ಎನಗಽ|
ಶ್ರೀಗಣರಾಯಾ | ಸ್ತುತಿಪಾಡಿ ಉಣಿಸುಽವೆನೊ ||೧||

ರಾಜಾನ್ನ ಕೆನೆಮುಸರಽ |
ರುಚಿಗಾಯಿ | ಭೋಃಜನಕ ಸವಿಮುಜ್ಜಿಗೆಽ |
ಸಾಜನಾಗಿ ಬಂದು ಸೆಳಿಮಂಚದಲಿ ಕುಳಿತು |
ಮತಿಯ ಪಾಲಿಸೊ ಎನಗಽ |
ಶ್ರೀಗಣರಾಯಾ | ಸ್ತುತಿಮಾಡಿ ಉಣಿಸುಽವೆಸೊ ||೨||

ಹಣ್ಣ ಹಪ್ಪಳ ಶೆಂಡಿಽಗಿ |
ಎಸಳಾದ | ಸಣ್ಣ ಶಾವಿಗಿ ಬನೆದಽ |
ಉಂಡ ಮಗಿ ನೊರೆಹಾಲ ಉದರ-ಸಕ್ಕರಿ ತುಪ್ಪ |
ಮತಿಯ ಪಾಲಿಸೊ ಎನಗಽ |
ಶ್ರೀಗಣರಾಯಾ | ಸ್ತುತಿಮಾಡಿ ಉಣಿಸುಽವೆಸೊ ||೩||

ಚಿಗುಳಿ ಚಿನ್ನಾಲ್ ಬಚ್ಚೇಃಪಽ |
ಚಿಟುಬಾಳಿ | ಅಗಲೋಃಳು ಗರಿಕಾಣೆಸಽ |
ಪರಿಪರಿ ಸೋಃಬಸ್ತ ಪರಿಮಳನೇಃರಸ್ತ |
ಮತಿಯ ಪಾಲಿಸೊ ಎನಗಽ |
ಶ್ರೀಗಣರಾಯಾ | ಸ್ತುತಿಪಾಡಿ ಉಣಿಸುಽವೆಸೊ ||೪||

ಸುರ ಹರಿ ನಮ ದೇವರ ಕಾಸಿ ।
ಧೊರಿಪೂಜಿ । ಧೊರಿಪೂಜಿ ಮಾಡುವೆನು ।
ಪರಿಪರಿ ಸೋಬಸ್ತ ಪರಿಮಳನೇರಸ್ತ ।
ಮತಿಯ ಪಾಲಿಸೊ ಎನಗ ।
ಶ್ರೀಗಣರಾಯಾ । ಸ್ತುತಿಮಾಡಿ ಉಣಿಸುವೆನೊ ॥ ೫ ॥

---

## ಸೊಲ್ಲಾಪುರದ ಸಿದ್ಧರಾಮೇಶ್ವರ ಸ್ತೋತ್ರ

ಬಾಗಿಲದಾಗಿನ ಕೋಗಿಲ ಕೂಗಿ ಕೂಗಿ ಮರನೇರಿ ।
ನಾಗರ್ಕ್ಷಿಡಿಯಂಗಾಡ್ಯಾವೇಳಯ್ಯಾ । ಸಿದ್ಧರಾಮಾ ।
ನಾಗರ್ಕ್ಷಿಡಿಯಂಗಾಡ್ಯಾವೇಳಯ್ಯಾ ॥ ೧ ॥

ಅತ್ತಿಯ ಮರನೇರಿ ಸತ್ತು ಸೊರಗಿ ನಾನೆ ಬಂದ ।
ಮುತ್ತಿನೊಸ್ತ್ರಾ ತೋರ್ಯಾರೇಳಯ್ಯಾ । ಸಿದ್ಧರಾಮಾ ।
ಮುತ್ತಿನೊಸ್ತ್ರಾ ತೋರ್ಯಾರೇಳಯ್ಯಾ ॥ ೨ ॥

ಆಲದ ಮರನೇರಿ ಆಲಪರದು ನಾನೆ ಬಂದ ।
ನೀಲದೊಸ್ತ್ರಾ ತೋರ್ಯಾರೇಳಯ್ಯಾ । ಸಿದ್ಧರಾಮಾ ।
ನೀಲದೊಸ್ತ್ರಾ ತೋರ್ಯಾರೇಳಯ್ಯಾ ॥ ೩ ॥

ಅಕ್ಕಿಪೂಜಿ ಬ್ಯಾಳಿಪೂಜಿ ಪ್ಯಾಲ ಎಲಿಯ ಘಟ್ಟಪೂಜಿ ।
ನಿತ್ಯಪೂಜಿ ಕಟ್ಟ್ಯಾರೇಳಯ್ಯಾ । ಸಿದ್ಧರಾಮಾ ।
ನಿಮಗ ಪೂಜಿ ಕಟ್ಟ್ಯಾರೇಳಯ್ಯಾ ॥ ೪ ॥

ಕೆಂಪ ಗಂಧಾ ಬಿಳಿಯ ಗಂಧಾ ಅಷ್ಟಗಂಧ ಸಿರಿಯಗಂಧಾ
ಛಂದದಿಂದ ಏರ್ಯಾವೇಳಯ್ಯಾ । ಸಿದ್ಧರಾಮಾ ।
ಛಂದದಿಂದ ಏರ್ಯಾವೇಳಯ್ಯಾ ॥ ೫ ॥

ಜಾಜಮಲ್ಲಿಗಿ ಜೂಜಮಲ್ಲಿಗಿ ಅರಳಮಲ್ಲಿಗಿ ಶಾವಂತಿಗ್ಹೂವಾ ।
ನಿಮ್ಮ ಪೂಜಿಗಿ ಬಂದಾವೇಳಯ್ಯಾ । ಸಿದ್ಧರಾಮಾ ।
ನಿಮಗ ಪೂಜಿ ಮಾಡ್ಯಾರೇಳಯ್ಯಾ ॥ ೬ ॥

ಅಚ್ಚದಚ್ಚ ಬೆಲ್ಲದಚ್ಚಾ ಮ್ಯಾಗ ಎಳ್ಳ ಚಿಗಳಿನೆಚ್ಚಾ ।
ನಿಮಗ ನೆವ್ರುದೀ ಬಂದಾವೇಳಯ್ಯಾ । ಸಿದ್ಧರಾಮಾ ।
ನಿಮಗ ನೆವ್ರುದೀ ತೋರ್‍ಯಾರೇಳಯ್ಯಾ ॥ ೭ ॥

ಬಾಜಿ ಬಾಜಿ ಬಾಜಿಯಂತರಿ ಬಾಳಿ ಬನದಾಗ್ ಹಲಗಿ ಖೊಂಬಾ ।
ಘೋರಗೆಜ್ಜಿ ಗಿಲ್ಲಂದಾವೇಳಯ್ಯಾ । ಸಿದ್ಧರಾಮಾ ।
ಘೋರಗೆಜ್ಜಿ ಗಿಲ್ಲಂದಾವೇಳಯ್ಯಾ ॥ ೮ ॥

ಗಂಗಿಯೊಳಗ ಸ್ನಾನ ಮಾಡಿ ಶಿವನ ಸಿಕರ ಸುತ್ತಿ ಬಂದು ।
ಹರದ್ಯೆರು ಫಲವ ಬೇಡ್ಯಾರೇಳಯ್ಯಾ । ಸಿದ್ಧರಾಮಾ ।
ಹರದ್ಯೇರು ಫಲವ ಬೇಡ್ಯಾರೇಳಯ್ಯಾ ॥ ೯ ॥

ಸಂಕರಾತರಿ ಭೋಗಿ ದಿನಾ ಮಲ್ಲಿನಾಥನ ಗುಡಿಯ ಒಳಗ ।
ನಾಚನಾದವ ಧೆಂದದಿಂದ । ಸಿದ್ಧರಾಮಯ್ಯ ।
ನಾಚನಾದವ ಧೆಂದಧೆಂದ ಸಿದ್ಧರಾಮಯ್ಯ ॥ ೧೦ ॥

ಸಂಕರಾತರಿ ಸಮುತಿ ದಿನಾ ನಂದಿಕೋಲಾ ಮೆರೆವ ದಿನಾ ।
ಟೆಂಗಕ್ಕೆ ಸೂರ್‍ಯಾದವೇಳಯ್ಯಾ । ಸಿದ್ಧರಾಮಾ ।
ಖಾರೀಕಕ್ಕೆ ಸೂರ್‍ಯಾದವೇಳಯ್ಯಾ ॥ ೧೧ ॥

ಸಂಕರಾತರಿ ಕರಿಯ ದಿನಾ ಮಿತ್ರೆರೆಲ್ಲಾ ಮಡಿಗಳುಟ್ಟು ।
ಮುತ್ತಿನಾರುತಿ ಎತ್ತ್ಯಾರೇಳಯ್ಯಾ । ಸಿದ್ಧರಾಮಾ ।
ಮುತ್ತಿನಾರುತಿ ಎತ್ತ್ಯಾರೇಳಯ್ಯಾ ॥ ೧೨ ॥

ಸಿಂಗರಾದ ಸೊಲ್ಲಪೂರ ಭಂಗರಾದ ಸಿದ್ಧರಾಮಾ ।
ಸಿಕರ ಕಟ್ಯ್ಯಾರು ರೈತರೆಲ್ಲಾರು । ಸಿದ್ಧರಾಮಾ ।
ಸಿಕರ ಕಟ್ಯ್ಯಾರು ರೈತರೆಲ್ಲಾರು ॥ ೧೩ ॥

ಕಮರ ತಕಳಿ ರೇವಣಸಿದ್ದಾ ಗಂಗಿಯೊಳಗ ಸಿದ್ಧರಾಮಾ |
ನಡುವ ಕುಂತಾರ ಮಲ್ಲಿಕಾರ್ಜುನನ | ಸಿದ್ಧರಾಮಾ |
ಊರಾಗ್ಹಾರ ಮಲ್ಲಿಕಾರ್ಜುನನ || ೧೪ ||

---

## ಪಂಢರಪುರದ ವಿಠೋಬನ ಸ್ತೋತ್ರ

ಇಟ್ಟಿಗೀ ಕಲ್ಲ ಮ್ಯಾಲ ಊರಿ ನಿಂತಾನೆರಡು ಪಾದ |
ಜರದ ಮಂದೀಲ ಶಾಲ
ಇಳಿಯ ಬಿಟ್ಟ್ಹಾರ ಜೋಲ
ನಾದ ಬ್ರಹ್ಮ ಮೇಘ ಶಾಮ
ಸೃಷ್ಟಿಕರ್ತ ಸರ್ವ ಗೋಮ
ಸಾದು ಸಂತರ ಪ್ರೇಮ
ಹ್ಯಾಂಗ ನಿಂತಾರೆನಗ ಪೇಳಿರೇ | ಶ್ರೀಪಾಂಡುರಂಗ |
ಹ್ಯಾಂಗ ನಿಂತಾರೆನಗ ಪೇಳಿರೇ || ೧ ||

ಟೊಂಕದ ಮ್ಯಾಲ ಕೈಯನಿಟ್ಟು ಹೃದಯದಲ್ಲಿ ಲತ್ತಿಪೆಟ್ಟು
ತೆಗ್ಗ ಬಿತ್ತು ಒಳ್ಳೆ ಎಷ್ಟು
ದುಕ್ಕ ಇಲ್ಲ ಎಳ್ಳಿನಷ್ಟು
ತುಳಸಿ ಮಾಳಿ ಬುಕ್ಕಿಟ್ಟು
ಹಗಲ ಇರಳ ಭಜನಿಗೋಳು
ಅವಂದೇ ಅಂಸ ಮೃದುಂಗ ತಾಳ
ಮದನ ಮೂರ್ತಿ ಗೋಪಾಳ
ಸಾದು ಸಂತರ ಮ್ಯಾಳ
ಹ್ಯಾಂಗ ನಿಂತಾರೆನಗ ಪೇಳಿರೇ | ಶ್ರೀಪಾಂಡುರಂಗ |
ಹ್ಯಾಂಗ ನಿಂತಾರೆನಗ ಪೇಳಿರೇ || ೨ ||

ಟೊಪ್ಪಿಗೀ ಲಿಂಗಕಾರ ಟಿಳಕ ಬಟ್ಟ ಚಂದ್ರತಾರಾ
ಮುಂದ ಹರಿವ ಭೀಮ ತೀರ
ಪುಣ್ಯಕ್ಷೇತ್ರ ಪಂಡರಿಪೂರ
ಪುಂಡಲೀಕ ಗೋಪುಕಾರ
ಚಾತುರ್ಮಾಸ ಪರಸಿ ಭಾಳ
ಯೋಗಿ ಜನರಿಗsಪರೂಪ
ನೇಮದಿಂದ ಸುಡುವ ಪಾಪ
ಈತನೇಸ ಬೌದ್ಧ್ಯ ರೂಪ
ಹ್ಯಾಂಗ ನಿಂತಾರೆನಗ ಪೇಳಿರೇ । ಶ್ರೀಪಾಂಡುರಂಗ ।
ಹ್ಯಾಂಗ ನಿಂತಾರೆನಗ ಪೇಳಿರೇ ॥ ೩ ॥

ಹಾಸ್ಯವದನ ಕಮಲನಯನ ಶೇಷಶಯನ ಗರುಡವಾಹನ
ಶಿವ್ಯಮೂಳ ನಿಜಧಾಮ
ರಾಮರಸ ರಸದಿಂದ
ಎಂದಿಗೀ ದೊರಕ್ಯಾನಂದ
ಹವಳ ಕೂಡಸ್ತ ಛಂದ
ಹ್ಯಾಂಗ ನಿಂತಾರೆನಗ ಪೇಳಿರೇ । ಶ್ರೀಪಾಂಡುರಂಗ
ಹ್ಯಾಂಗ ನಿಂತಾರೆನಗ ಪೇಳಿರೇ ॥ ೪ ॥

---

## ಎಡವೂರ ವೀರಭದ್ರನ ಸ್ತೋತ್ರ

ಎಡವೂರ ತಳವಲ್ಲಿ ಏನೇನ ಶಡಗರ
ಎಡಕ ನಂದೀಕೋಲ ಬಲಕ ಪಲ್ಲಕಿ ಪಂಕ
ಶಡಗರದ ಛತ್ತ್ರಕಿ ಎಡಬಲ ಬತಾಗೀರಿ
ಹಾರೂವ ಹೂಬಾಣ ಹೊಬತ್ತಿ ಕಂಡಿsರಿ
ಗುಗ್ಗsಳದಾರೂತಿ ಗುಡಿಮುಂದ ಕಂಡಿsರಿ

ಶರಣಬಂದಯ್ಯಗ ಕರಣ ನೋಡಿ ಪೂಜಿಗೋಳ ಬನ್ನೆ
ಜಯಮಂಗಳಽ ನಿತ್ಯ ಶಿವಮಂಗಳ ॥ ೧ ॥

ಹಣಿಯ ಮ್ಯಾಲಿನ ಗಂಧ ಗಿಣಿರಾಮ ಕುಂತಂಗ
ಕರಿಯ ಕುಂದಲದ್ಹರಳ ಕಿವಿಯಾಗ ಇಟ್ಟ್ಯಾನ
ಏಸೊಂದು ಶೃಂಗಾರ ಎಡಗೈಲಿ ಹಿಡದಾನ
ಪರವೂತ ಗಿರಿಗುಡ್ಡ ಬಲಗೈಲಿ ಹಿಡದಾನ
ಚಳ್ಳೃಂಗ್ರ ಚಿಮ್ಮೂತ ಕ್ವಾರ್ಮೀಸಿ ತಿದ್ದೂತ
ಕರಿ ಈರಭದ್ರನ ಕರಣ ನೋಡಿ ಪೂಜಿಗೋಳ ಬನ್ನೆ
ಜಯಮಂಗಳಽ ನಿತ್ಯ ಶಿವಮಂಗಳ ॥ ೨ ॥

ಬಿಳಿಯಂಗಿ ತೊಟ್ಟ್ಯಾನ ಬಿಗದುಟ್ಟು ನಿಂತಾನ
ಸರಗಂಟಿ ಸರಮಾಲಿ ಕೊರಳಿಗಿ ಹಾಕ್ಯಾನ
ಏಸೊಂದ ರುದ್ರಾಕ್ಷಿ ಸ್ವಾಮಿ ತಾ ಧರಸ್ಯಾನ
ಪಡಪಽಲ ದಿಕ್ಕಿಽಗಿ ಒಡೆಯ ತಾ ನೆನದಾನ
ತುಂಗಬದ್ರಿ ಕಾಳಿ ಬಾಗಿಽಲ ತೆರೆಯಂದ
ಕರಿ ಈರಭದ್ರನ ಕರಣ ನೋಡಿ ಪೂಜಿಗೋಳ ಬನ್ನೆ
ಜಯಮಂಗಳಽ ನಿತ್ಯ ಶಿವಮಂಗಳ ॥ ೩ ॥

ಮಂಗಳಾರಽ ದಿನ ವೀರ ನಿನ್ನೋಲಗ
ಚಿಟ್ಟಿ ಚಿಣಗೀ ಹೂವ ದುಂಡಮಲ್ಲಿಗಿ ಹೂವ
ಕೊಂಡಾಡೊ ದಾಸ್ಯಾಳ ಮಂಡ್ಲೀಸೂರದ್ಹೂವ
ಏಳ ಸಮದುರದಾನ ಪಾರಿಽಜಾತದ ಹೂವ
ಕಂಚಿಽಯ ಈ ಮಗ್ಗಿ ಕಮಳದ ಈ ಮಗ್ಗಿ
ಖ್ಯಾದಿಽಗಿ ಹೊಡಿ ನೂರು ಖ್ಯಾದಿಽಗಿ ಗರಿ ನೂರು
ಎಲ್ಲಽಕ ಹೆಚ್ಚಿಂದು ಬೆಲ್ಲಪತ್ತ್ರಿ ನೂರು
ಕರಕಿಽಯ ಪತ್ತ್ರಿಽರಿ ಕರಿಯ ತುಂಬೀ ಹೂವ
ಕರಿ ಈರಭದ್ರನ ಕರಣ ನೋಡಿ ಪೂಜಿಗೋಳ ಬನ್ನೆ
ಜಯಮಂಗಳಽ ನಿತ್ಯ ಶಿವಮಂಗಳ ॥ ೪ ॥

ಹೆಗ್ಗಾಳಿ ಚಿನಕಾಳಿ ದೊಡ್ಡ ರಂಗಿನ ಕಾಳಿ
ಊದುsಸು ನೆಣಪೇರಿ ಬಾರಿsಸು ನಗಾರಿ
ಆಡು ಪಾತರ ಮ್ಯಾಳ ಗುಡಿಮುಂದ ಕಂಡೆsರಿ
ಗುಗ್ಗsಳದಾರೂತಿ ಗುಡಿಮುಂದ ಕಂಡೆsರಿ
ಶರಣಬಂದಯ್ಯಗ ಕರಣ ನೋಡಿ ಪೂಜಿಗೋಳ ಬನ್ನಿ
ಜಯಮಂಗಳsಸ ನಿತ್ಯ ಶಿವಮಂಗಳ || ೫ ||

---

## 'ವಾರಿ ರುಮ್ಮಾಲ ಸುತ್ತಿ'



ವಾರಿ ರುಮ್ಮಾಲ ಸುತ್ತಿ ಓಣ್ಯಾಗ ನಿಂತಾನ |
ಹ್ವಾರ್ಯಾನಿಲ್ಲೇನೊ | ಹೊಲದಾಗ ಹೊಲದಾಗ |
ಹ್ವಾರ್ಯಾನಿಲ್ಲೇನೊ ||
ಹ್ವಾರ್ಯಾನಿಲ್ಲs ಏನೊ ಹೊಲದಾಗ ಚಂದರಾಮಾ |
ನಾರ್ಯಾರಿಲ್ಲೇನೊ | ಮನಿಯಾಗ ಮನಿಯಾಗ |
ನಾರ್ಯಾರಿಲ್ಲೇನೊ || ೧ ||

ಮಕಮಕ ಮಲ್ಲೀಗಿ ಆದರಾಗ ಖ್ಯಾದೀಗಿ |
ಬಿಚ್ಚಿ ನೋಡಿದರ | ಬೀಯೆಲಿಯೊ ಬೀಯೆಲಿಯೊ |
ಬಿಚ್ಚಿ ನೋಡಿದರ ||
ಬಿಚ್ಚೀನೆ ನೋಡಿದರ ಬೀಯೆsಲಿಯಂಥವಳು |
ಬಿಟ್ಟ ಮಲಗೂದು | ಛಂದೇನೊ ಛಂದೇನೊ |
ಬಿಟ್ಟ ಮಲಗೂದು || ೨ ||

ಬಿಟ್ಟsರ ಬಿಡಲ್ಯಾಕ ಬಿಗುವೀನ ಮಾತ್ಯಾಕೊ |
ಬಿಟ್ಟಕ್ಕಿ ಮ್ಯಾಲ | ಮನಸ್ಯಾಕೊ ಮನಸ್ಯಾಕೊ |
ಬಿಟ್ಟಕ್ಕಿ ಮ್ಯಾಲ ||
ಬಿಟ್ಟಕ್ಕಿಯs ಮ್ಯಾಲ ಮನಸ್ಯಾಕೊ ಚಂದರಾಮಾ |
ಕಟ್ಟಿಕಲ್ಲಾಗಿ | ಇರಹೋಗೊ ಇರಹೋಗೊ |
ಕಟ್ಟಿಕಲ್ಲಾಗಿ || ೩ ||

ಬಾಳಿ ಕೊಯ್ದ್ರರ ತೋಟ ಹಾಳಾದರರಿಂದೇನೊ |
ಆಳಲ್ದ ರಾಯಾ | ಮಡದೀಗೊ ಮಡದೀಗೊ |
ಆಳಲ್ದ ರಾಯಾ ||

ಆಳಲ್ದನ್ನ ರಾಯಾ ಮಡದೀಗಿ ಬಿಟ್ಟರ |
ಬಾಳೆಹಣ್ಣೇನೊ | ಕೆಡಲಾಕೊ ಕೆಡಲಾಕೊ |
ಬಾಳೆಹಣ್ಣೇನೊ || ೪ ||

ಮಲ್ಲಿಗ್ಹೂವಿನ ದಂಡಿ ಅಲ್ಲಿಟ್ಟ ಇಲ್ಲಿಟ್ಟ
ಕಲ್ಲ ಮ್ಯಾಲಿಟ್ಟ | ಕೈಯಾಗಿಟ್ಟ ಕೈಯಾಗಿಟ್ಟ |
ಕಲ್ಲ ಮ್ಯಾಲಿಟ್ಟ ||

ಕಲ್ಲ ಮ್ಯಾಲ ಇಟ್ಟ ಕೈಯಾಗಿಟ್ಟ ಚಂದರಾಮಾ |
ಪಾದ ಮ್ಯಾಲಿಟ್ಟ | ಶರಣೆಂದ ಶರಣೆಂದ |
ಪಾದ ಮ್ಯಾಲಿಟ್ಟ || ೫ ||

---

## 'ಹಣ್ಣ ಬಂದಾವ ಹಣ್ಣ'

ಹಣ್ಣ ಬಂದಾವ ಹಣ್ಣಾ ಮಗಿಯ ಮಾವಿನ ಹಣ್ಣ ಜಾಣಿ ||
ಹಣ್ಣ ಕೊಳತೇವ ಹಣ್ಣಿನ ಬೆಲಿಯ ಹೇಳ ಜಾಣಿ || ೧ ||

ಬೆಲಿಯ ಹೇಳುವ ಜಾಣಾ ಮಲ್ಲಾಡ ದೇಶಕ್ಹೋಗಿದನಲ್ಲೋ ಜಾಣಾ ||
ತಿಳಿಯಲಾರದ ಬೆಲಿಯ ನಾ ಏನ್ಹೇಳಾಲೊ ಜಾಣಾ || ೨ ||

ಕೆರಿಯ ಪಾಳ್ಯದ ಮ್ಯಾಲ ಕರಿ ಕಬ್ಬ ಹಚ್ಯಾರಲಮ್ಮ ಜಾಣಿ ||
ಅದರಾಗ ತುಡಗ ದನ ಹೊಗತಾವಲಮ್ಮ ಜಾಣಿ || ೩ ||

ತುಡಗ ದನ ಹೊಕ್ಕರ ಹೊಡದಾರ ಬಡದಾರೋ ಜಾಣಾ ||
ನಾಲೂರ ಕೂಡಿ ಬುದ್ದೀ ಹೇಳುವರಲ್ಲೋ ಜಾಣಾ || ೪ ||

ಭಾಂಯಾದರ ಕಟ್ಯಾರಲ್ಲ ಅರುಟಿಗ್ಯಾದರಿಟ್ಯಾರಲಮ್ಮ ಜಾಣಿ ||
ಅದರಾಗ ದಾನ ಧರ್ಮ ಇಲ್ಲವೇನ ಜಾಣಿ || ೫ ||

ಅನ್ನ ವಸ್ತ್ರರು ದಾನ ಬೆಳ್ಳಿ ಬಂಗಾರ ದಾನೋ ಜಾಣಾ ||
ಹೆಣ್ಣು ಮಕ್ಕಳ ದಾನಾ ಕೊಡುವವರೇನೋ ಜಾಣಾ ||೬||
ಗುಡಿಯಾದರು ಕಟ್ಟ್ಯಾರಲ್ಲಾ ಕಳಸಾದರಿಟ್ಟಾರಲಮ್ಮ ಜಾಣೆ ||
ಕಣ್ಣೊತ್ತಿ ಕಳಸಗೋಳು ಒಡೆದಾವಲಮ್ಮ ಜಾಣೆ ||೭||
ಒಡೆದಾರೆ ಒಡಿಯಾಲಿ ಒಡೆದುನೆ ಛಲ್ಲುವಲೋ ಜಾಣಾ ||
ಒಡಹುಟ್ಟಿದಣ್ಣಾನಾಗಿ ಇರನೆ ಹೋಗೋ ಜಾಣಾ ||೮||

## 'ಸಬ್ಬಂಬು ರಾತೂರಿ'

ಸಬ್ಬಂಬು ರಾತೂರಿ ಒಬ್ಬಕ್ಕಿ ನಾ ಇದ್ದ |
ನೀವೆಲ್ಲಿ ಹೋಗಿ ಬಂದ್ರಿ | ನೀವೆಲ್ಲಿ ಆಡಿ ಬಂದ್ರಿ ||೧||

ಜಾಣೆ | ಬೆಟ್ಟಂಬು ಬ್ಯಾಸಗಿ | ಕಣ್ಣಿಗಿ ನಿದ್ದಿಲ್ಲ |
ತನುಗಾಳಿಗ್ಹೋಗಿದ್ದೇವ | ತನುಗಾಳಿಗ್ಹೋಗಿದ್ದೇವ ||೨||

ಎದಿಯ ಮ್ಯಾಲಿನ ಘಾಯಿ ಎಳಿಯ ಚಂದ್ರಮನಂಗ |
ನೀವೆಲ್ಲಿ ಹಾದು ಬಂದ್ರಿ | ನೀವೆಲ್ಲಿ ಹೋಗಿ ಬಂದ್ರಿ || ||೩||

ಜಾಣೆ | ಬಾಳಿಯ ಬನದಾಗ | ಹಾದು ನಾವ್ಬರುವಾಗ |
ಬಾಳಿಯ ಗರಿ ತಾಕ್ಯಾವ | ಬಾಳಿಯ ಗರಿ ತಾಕ್ಯಾವ ||೪||

ಹುಬ್ಬ ಹುಬ್ಬಿನ ಘಾಯಿ ಹುಬ್ಬೆಲ್ಲ ಚ್ಯೂರು ಘಾಯಿ |
ನೀವೆಲ್ಲಿ ಹೋಗಿ ಬಂದ್ರಿ | ನೀವೆಲ್ಲಿ ಆಡಿ ಬಂದ್ರಿ ||೫||

ಜಾಣೆ | ತ್ವಾಟದಾಗ ಇರುವ | ನೀಟುಳ್ಳ ಗಜನಿಂಬಿ |
ಗಜನಿಂಬಿ ಗರಿ ತಾಕ್ಯಾವ | ಗಜನಿಂಬಿ ಗರಿ ತಾಕ್ಯಾವ ||೬||

ನಾರ್‍ಯಾರ್ಹ್ಚಲ್ಲಪುಡಿ | ನಾರ್‍ಯಾರ್ಹ್ಚಲ್ಲಪೂಡಿ |
ನಿಮ್ಹಲ್ಲಿಗ್ಯಾಕ್ಹತ್ಯಾವರೀ | ನಿಮ್ಹಲ್ಲಿಗ್ಯಾಕ್ಹತ್ಯಾವರೀ ||೭||

ಜಾಣಿ । ಗೊಲ್ಲರ ಓಣ್ಯಾಗ ಹಾದು ನಾವ್ಬರುವಾಗ ।
ಅವರು ಹಲ್ಲಿಗಿ ತಂದ್ಧುಚ್ಚಿದರs । ಅವರು ಹಲ್ಲಿಗಿ ತಂದ್ಧುಚ್ಚಿದರ ॥ ೮ ॥

ಹತ್ತ್ರ ವಾರಿsನ ಹೂವಿನs ಶಾಲ್ಗೊsಳು ।
ಮತ್ತ್ಯಾಕ ಮಾಸಿದವರಿ । ಮತ್ತ್ಯಾಕ ಬೆವತಿದವರಿ ॥ ೯ ॥

ಜಾಣಿ । ಗರಡಿsಯ ಮನಿಯಾಗ । ಸಗತಿ ನಾ ಹೊಡಿಯಾಗ ।
ಕಿರಿಬೆವರ ಬಿಟ್ಟಿದಾವs । ಕಿರಿಬೆವರ ಬಿಟ್ಟಿದಾವ ॥ ೧೦ ॥

ಹತ್ತ್ರ ವಾರಿsನ ಮುತ್ತಿsನ ನಡಕಟ್ಟ ।
ಮತ್ತ್ಯಾಕ ಮಾಸಿದವರಿ । ಮತ್ತ್ಯಾಕ ಬೆವತಿದವರಿ ॥ ೧೧ ॥

ಜಾಣಿ । ಚೆಂಡಾಟನಾಡಾಗ । ಕೃಷ್ಣರು ಬಂದ್ಹಿಡಿಯಾಗ ।
ಬಿದ್ದಲ್ಲಿ ಮಾಸಿದಾವs । ಬಿದ್ದಲ್ಲಿ ಮಾಸಿದಾವ ॥ ೧೨ ॥

ಎಷ್ಟೆಂತ ಹೇಳಲಿ ಎಷ್ಟೆಂತ ಕೇಳೂತಿ ।
ಕೃಷ್ಣರ ದೇಶಕ್ಹೋsಗಿದ್ದೇವs । ಕೃಷ್ಣರ ದೇಶಕ್ಹೋsಗಿದ್ದೇವ ॥ ೧೩ ॥

ಭಾಳ ಭಾಳ ಮಾತಾಡತೀದಿ ಬಾಯ್ ಪಾಟ್ಲಿ ಬೈತೀದಿ ।
ರಂಗಿsಗಿ ಬಂದಿ ನೀನು । ಭಾಳ ಪೆಟ್ಟsಗಿ ಬಂದಿ ನೀನು ॥ ೧೪ ॥

ಊರ ಹೊರಗಿsನ ನಿಷ್ಕುಳ್ಳಿಣಮನ ಮುಂದ ।
ಆಣಿ ಮಾಡುಣು ನಡಿಯ । ಆಣಿ ಮಾಡೂಣು ನಡಿಯ ॥ ೧೫ ॥

---

## ಕೊರವಂಜೀ ಹಾಡು

ಬಾಳಿsಯ ಬನದಾಗ ಬಾಲ ಚೆಂಡಾಡ್ಯಾನ
ಬಾ ನನ್ನ ಮಗನs ಅಬರಂಗ ಧೊರಿಯs
ಬಾಳಿಕಿಂತಾ ಛೆಲಿವ್ಯೋ । ನನ ಸೊಸಿ ।
ಬಂದೊಮ್ಮೆ ಮಕದೋರೊ ॥ ೧ ॥

ಬಾಳಿಕಿಂತ ಛೆಲಿವ್ಯಾದ್ರ ಭಾಂಯಾಗ ಸುಗಸವ್ವಾ
ಉಟ್ಟೀದ ದಟ್ಟಿs ಕಳಕೋರ್ಹಡದವ್ವಾ
ಬಿಟ್ಟುಚ್ಚ ತವರ್ಮನಿsಗೇ । ನಾ ನನ್ನ ।
ಬಲ್ಲಂತ ಸುಳಿಗಾರನs ॥ ೨ ॥

ನಿಂಬಿsಯ ಬನದಾಗ ಕಂದ ಚೆಂಡಾಡ್ಯಾನ
ಬಾ ನನ್ನ ಮಗನs ಅಬರಂಗ ಧೊರಿಯs
ನಿಂಬಿಕಿಂತಾ ಛೆಲಿವ್ಯೋ । ನನ ಸೊಸಿ ।
ಬಂದೊಮ್ಮೆ ಮಕದೋರೊ ॥ ೩ ॥

ನಿಂಬಿಕಿಂತ ಛೆಲಿವ್ಯಾದ್ರ ಭಾಂಯಾಗ ಸುಗಸವ್ವಾ
ಕಟ್ಟೀದ ಕರಮಣಿs ಹರಕೋರ್ಹಡದವ್ವಾ
ಬಿಟ್ಟುಚ್ಚ ತವರ್ಮನಿsಗೇ । ನಾ ನನ್ನ ।
ಬಲ್ಲಂತ ಸುಳಿಗಾರನs ॥ ೪ ॥

ಅಣ್ಣಾನ ಮಗಳಂತ ಹಮ್ಮೀಲಿ ಕರತಂದ
ನನ ಮsಗ ಮಾತಾ ಕೇಳವಲ್ಲ ಸೊಸಿ ಮುದ್ದ
ಹೋಗವ್ವ ತವರ್ಮನಿsಗೆ । ಸೊಸಿಮುದ್ದ ।
ಹೋಗವ್ವ ತವರ್ಮನಿsಗೆ ॥ ೫ ॥

ಅಣ್ಣಾಗೋಳ್ಯರ ತಮ್ಮಾಗೋಳ್ಯರ ತಾಯ್ಯಾರ ತಂದ್ಯಾರ
ಅಣಾ ನ್ಹಂಡಾರೊಂದವರ್ಯಾsರತ್ತೆವ್ವಾ
ಹೋಗ್ಲಾರೆ ತವರ್ಮನಿsಗೆ । ಅತ್ತೆವ್ವ ।
ಹೋಗ್ಲಾರೆ ತವರ್ಮನಿsಗೆ ॥ ೬ ॥

ಒಂದ ಹೊನ್ನs ಕೊಟ್ಟು ಮದಿವ್ಯಾರೆ ಮಾಡಿsದಿ
ಎರಡ್ಹೊನ್ನ ಕೊಟ್ಟು (ಕೊರವಂಜಿ) ಬುಟ್ಟಿ ಕೊಂಡು ಕುsಡತ್ತಿ
ಗಂಡsನ ನೋಡಿ ಬರುವೆ । ಗಂಡನ ।
ರಂಡೀಯ ನೋಡಿ ಬರುವೆ ॥ ೭ ॥

ಒಂದ ವ್ಯೆ ಮುತ್ತ್ಯs ಹಚ್ಚಿ ಒಂದ ವ್ಯೆ ಮಾಣಿಕ ಹಚ್ಚಿ
ಕೆತ್ತ್ರ ಮಾಣಿಕ ಬುಟ್ಟಿ ತಂದಿಟ್ಟ್ಯಾಳತ್ತ್ರೆವ್ವ |
ಆ ಕ್ಷಣಕ ತಂದಿಟ್ಟ್ಯಾಳತ್ತ್ರೆವ್ವಾ || ೮ ||

ಚಿಪ್ಪೂಲಿ ಮೆಟ್ಟಿದಾಳs ಎನ್ನಮ್ಮ
ಚಿಪ್ಪೂಲಿ ಮೆಟ್ಟಿದಾಳ ಎನ್ನಮ್ಮ | ಚಿಪ್ಪೂಲಿ ಮೆಟ್ಟಿದಾಳ |
ರಾಯsರ ಇರುವೂದು ರಾಜಪಟ್ಟಣದ್ಹಾದಿ ದಾವದೊಂದ್ಹೇಳಿ
ಕೊಡಿರಿ || ೯ ||

ದನಕಾಯೊ ಅಣ್ಣಾಗಳಿರ್‍ಯಾ ಎನ್ನಮ್ಮ |
ದನಕಾಯೊ ತಮ್ಮಗಳಿರ್‍ಯಾ ಎನ್ನಮ್ಮ | ದನಕಾಯೊ ಅಣ್ಣಾಗಳಿರ್‍ಯಾ ||
ರಾಯsರ ಇರುವೂದು ರಾಜಪಟ್ಟಣದ್ಹಾದಿ ದಾವದೊಂದ್ಹೇಳಿ
ಕೊಡಿರಿ || ೧೦ ||

ಬಾಳಿsಯ ಬಲಕ್ಹಾಯs ಎನ್ನಮ್ಮ |
ನಿಂಬಿsಯ ಎಡಕ್ಹಾಯs ಎನ್ನಮ್ಮ | ನಿಂಬಿsಯ ಎಡಕ್ಹಾಯ |
ನಾಗಸಂಪಿಗೆsಯ ನಡುವ್ಹಾಯ ಕೋಲು ಕೋಲಣ್ಣ ಕೋಲ || ೧೧ ||
ಹಸರೊಂದು ಉಟ್ಟಿದಾಳs ಎನ್ನಮ್ಮ |
ಹಸರೊಂದು ತೊಟ್ಟಿದಾಳ ಎನ್ನಮ್ಮ | ಹಸರೊಂದು ತೊಟ್ಟಿದಾಳ |
ಹಸರೊಂದ ಸೆರಗಾ ಮರಿಮಾಡಿ ತನ್ನಂಥಾ ಹರದ್ಯಾರನ
ಬಲಗೊಂಡಾಳ || ೧೨ ||

ಕೆಂಪೊಂದು ಉಟ್ಟಿದಾಳs ಎನ್ನಮ್ಮ
ಕೆಂಪೊಂದು ತೊಟ್ಟಿದಾಳ ಎನ್ನಮ್ಮ | ಕೆಂಪೊಂದು ತೊಟ್ಟಿದಾಳ |
ಕೆಂಪೊಂದು ಸೆರಗಾ ಮರಿಮಾಡಿ ತನ್ನಂಥಾ ಬಾಲ್ಯಾರನ
ಬಲಗೊಂಡಾಳ || ೧೩ ||

ಆನಿ ಆನಿsಯ ಮುಂದ ಎನ್ನಮ್ಮ |
ಆನಿsಯ ಮರಿಮುಂದ ಎನ್ನಮ್ಮ | ಆನಿsಯ ಮರಿಮುಂದ |
ಆನಿsಯ ಏರೂವ ಚಿದರ ಮನ್ನೆರ ಮಗಳು ಹೊಂಟಾಳ
ರಾಜಬೀದಿsಗೆ || ೧೪ ||

ಒಂಟಿ ಒಂಟ್ಯಾಯ ಮುಂದs ಎನ್ನಮ್ಮ।
ಒಂಟ್ಯಾಯ ಮರಿಮುಂದ ಎನ್ನಮ್ಮ। ಒಂಟ್ಯಾಯ ಮರಿಮುಂದ।
ಒಂಟ್ಯಾಯ ಏರೂವ ಭಂಟ ಮನ್ನೆರ ಮಗಳು ಹೊಂಟಾಳ
ರಾಜಬೀದ್ಯಾಗೆ ॥ ೧೫ ॥

ಕಾಲ ಕಂಚಿನ ಪಿಲ್ಲೆ ಕಿಂವಿಯಾಗ್ಹಿತ್ತಾಳಿ ವಾಲಿ।
ಸರಪ್ಯಾಳಿ ಘಂಟಿ ಸರದ್ಯಾಳೆವ್ವ ನೀ।
ಯಾ ನಾಡದ ಕೊರಿವೇ। ಜಾಣಿ ನೀ।
ಯಾ ನಾಡದ ಕೊರಿವೇ ॥ ೧೬ ॥

ಆ ನಾಡದ ಕೊರಿವ್ಯಲ್ಲ ಈ ನಾಡದ ಕೊರಿವ್ಯಲ್ಲ।
ದೇವಲೋಕಾದs ಕೊರಿವಿದ್ದೊ ಜಾಣ ನಾ।
ದ್ಯಾವಾರ್ಥೀಳತೇನೊ। ಕೈ ತಾ।
ಕೈ ತಾ ಕೈ ತಾರೋ ॥ ೧೭ ॥

ಆ ನಾಡದ ಕೊರಿವ್ಯಲ್ಲ ಈ ನಾಡದ ಕೊರಿವ್ಯಲ್ಲ।
ದೇವಲೋಕಾದs ಕೊರಿವಿದ್ದೊ ಜಾಣ ನಾ।
ದ್ಯಾವಾರ್ಥೀಳತೇನೋ। ಸೂಳ್ಯಾರು।
ಮಾಡೇರಿ ಹೊಡಿತಾರೊ ॥ ೧೮ ॥

ನನ್ನ ಮಡದಿನ ಬಿಟ್ಟು ಹನ್ನೆರಡು ವರುಷಾಯ್ತು।
ಮಡದೀಗಿ ನನಗs ಕೂಡಿಷ ಕೊರವಂಜಿ।
ಕೈಯಾರಿ ಜೋಡಸ್ತೇನ। ನಾ ನಿನ್ನ।
ಕಾಲಾರಿ ಬೀಳ್ತೇನ ॥ ೧೯ ॥

ನನ್ನ ಮಡದೀನ ಬಿಟ್ಟು ಹನ್ನೆರಡು ವರುಷಾಯ್ತು।
ಮಡದೀಗಿ ನನಗs ಕೂಡಿಸ ಕೊರವಂಜಿ।
ಕರಕೊಂಡು ಬರತೀನ। ನಾ ನಿನಗ।
ಸೀರಿ ಕುಬಸ ಮಾಡ್ತೇನ ॥ ೨೦ ॥

ನನ ಕಾಲ ಬೀಳಲಕ ನನ್ನ ಕೈ ಜೋಡಿಸಲಕ।
ಯಾರೀಗಿ ಯೇನs ಮಾಡೀsದಿ ಮಾರಾಯಾ।
ಹೋಗೂನು ನಡೀರಿ। ಮಾರಾಯಾ।
ಹೋಗೂನು ನಡೀರಿ ॥ ೨೧ ॥

ಗಂಡಹೆಂಡರವರು ಗರದೀಲಿ ಬರುವಾಗ।
ಕತ್ತ್ಹಿಂತ ರಂಡೀ ಬೆನ್ಹತ್ತಿ ಬರತಾಳ।
ಹೊಡೆದ್ಹಾsಕಿಹಿಂದsಕ। ಅಕಿ ತನ್ನ।
ಹೊಡಮsಳಿ ಹೊಳ್ಳಿದಂsಗ ॥ ೨೨ ॥

ಆರು ವರುಷಾ ತಿರುಗಿ ಆರಸsರ ತಂದೀದ।
ಅತ್ತಿ ಬಾ ಹೊರಿಯಾಕ। ನಿನ ಮಗನ।
ಕರಕೋರೊಳಿಯಾsಕ ॥ ೨೩ ॥

---

## ಗಂಗೀ ಗೌರೀ ಹಾಡು

(೧)

ಗಂಗಿನ ತರಬೇಕಂತ ನಂದಿನ ಸ್ಹಂಗಾರ ಮಾಡಿ ॥
ಕೊಂಬಣಸ ಕೊರಳs ಹುಲಗೆಜ್ಜಿ। ಕೋಲ ॥ ೧ ॥

ಕೊಂಬುs ಅಣನ ಕೊರಳ ಹುಲಗೆಜ್ಜಿ ಶಿವರಾಯಾ ॥
ಗಂಗಿsನ ತರವೋs ನಡದಾರ। ಕೋ ॥ ೨ ॥

* * * *

ಹಳ್ಳsದ ದಂಡಿsಗಿ ಹೊವ ಕೋವೂ ಜಾಣಿ ॥
ಲಿಂಗಕೊಂಡ್ಹೊವ ದಯಮಾಡ। ಕೋ ॥ ೩ ॥

ಲಿಂಗಕೊಂಡ್ಹೊವs ದಯಮಾಡಿದ್ರ ಮಾಡೇನ ॥
ನಮ್ಮವ್ವ ನಮಗs ಬೈದಾಳ। ಕೋ ॥ ೪ ॥

ಹಳ್ಳsದ ದಂಡಿsಗಿ ಹೂವ ಕೋವ್ರೂ ಜಾಣಿ ||
ಲಿಂಗಕ್ಕೆರಡ್ಹೂವs ದಯಮಾಡ | ಕೋ || ೫ ||

ಲಿಂಗಕ್ಕೆರಡ್ಹೂವ ದಯಮಾಡಿದ್ರ ಮಾಡೇನ ||
ಸಮ್ಮಪ್ಪ ನಮಗs ಬಡದಾನ | ಕೋ || ೬ ||

ನಿಮ್ಮವ್ವ ಬೈದsರ ನಿಮ್ಮಪ್ಪ ಬಡಿದsರ ||
ಬೇಗ ಬಾ ಗಂಗಾ ಜಡಿಯಾಗ | ಕೋ || ೭ ||

ಬಂದsರ ಬಂದೇನ ನೆಂಬಿಗಿಲ್ಲೋ ಶಿವನೆ ||
ರಂಭ್ಯಾsಳೊ ನಿನ್ನ ಮನಿಯಾಗ | ಕೋ || ೮ ||

ನನ್ನಾಣಿ ನಿನ್ನಾಣಿ ಮತ್ತ ನಿಂಗದಾಣಿ ||
ರಂಬಿಲ್ಲ ನನ್ನ ಮನಿಯಾಗ | ಕೋ || ೯ ||

ಬಂದsರ ಬರುವೇನೊ ನೆಂಬಿಗಿಲ್ಲೋ ಶಿವನೆ ||
ಮಡದ್ಹ್ಯಾಳೊ ನಿನ್ನ ಮನಿಯಾಗ | ಕೋ || ೧೦ ||

ನನ್ನಾಣಿ ನಿನ್ನಾಣಿ ಮತ್ತ ದೇವsರಾಣಿ ||
ಮಡದಿಲ್ಲ ನನ್ನ ಮನಿಯಾಗ | ಕೋ || ೧೧ ||

* * * *

ಜಡಿಯಾಗ ಹೋಗೂದು ಗಿಣಿರಾಮ ಕಂಡಾನ ||
ಹೋಗಿ ಹೇಳ್ಯಾನs ಗೌರವ್ವ | ಕೋ || ೧೨ ||

ಮನಗಿsದ ಗೌರವ್ವ ಮೈಮುರಿದು ಎದ್ದ್ಯಾಳ ||
ತಣ್ಣೀರ ಗಿಂಡೀಲಿ ಮಕ ತೊಳೆದ | ಕೋ || ೧೩ ||

ತಣ್ಣೀರ ಗಿಂಡೀಲಿ ಮಕ ತೊಳೆದ ಗೌರವ್ವ ||
ಹ್ವಾದಾಳಣ್ಣಾsನ ಅರಮನಿಗಿ | ಕೋ || ೧೪ ||

ಎಂದಿಲ್ದ ಗೌರವ್ವ ಇಂದ್ಯಾಕ ಬಂದಾಳ ||
ಕುಂಡsರ ಕುಡರೇ ಮಣಿಚೌಕಿ | ಕೋ || ೧೫ ||

ಕುಂಡ್ರಽರ ಬಂದಿಲ್ಲ ನಿಂದ್ರಽರ ಬಂದಿಲ್ಲ ||
ನಾ ಒಂದ ಕನಸ ಹೇಳಬಂದ | ಕೋ॰ || ೧೬ ||

ಕೆರಿಮ್ಯಾಲಿ ಕೆರಿಹುಟ್ಟಿ ಕೆರಿಮ್ಯಾಲಿ ಮರಹುಟ್ಟಿ ||
ಮರದ ಮ್ಯಾಲೊಬ್ಬಽ ಬಲಿಹಾಕಿ | ಕೋ॰ || ೧೭ ||

ಕೆರಿಯಂದ್ರ ಶಿವರಾಯಾ ಮರ ಅಂದ್ರ ಬಡಿಗೋಳು ||
ಬಲಿಯಂದ್ರ ಒಳಗ ಸಿರಿಗಂಗಿ | ಕೋ॰ || ೧೮ ||

ದೇಶಾನೆ ಆಳವರಿಗೇಸೊಂದು ಹೇಂಡ್ರಽರ ||
ನಿನಗ್ಯಾಕ ತಂಗೀ ಪರದುಕ್ಕ | ಕೊಂ || ೧೯ ||

ಕಿಡಿಕೆಂಡಿಸಾಽದಾಳ ಕಿಡಿಚಂಡಸಾದಾಳ ||
ಎಡಪಿಽದ ಬೆರಳೋಽದರವಿಲ್ಲ | ಕೋ॰ || ೨೦ ||

ಎಡವೀದ ಬೆರಳೊಂದರವಿಲ್ಲ ಗೌರವ್ವ ||
ಬಂದಾಳ ತನ್ನ ಅರಮನಿಗೆ | ಕೋ॰ || ೨೧ ||

* * * *

ಗೊಬ್ಬೂರ ಹಾದೀಲಿ ಒಬ್ಬಯ್ಯ ಬರತಾನ ||
ಅಬ್ಬರಣಿ ಗೌರೀ ಸಿಂರಿಽಡ | ಕೋ॰ || ೨೨ ||

ಒಂದ್ ಗಿಂಡಿ ಇಡು ಅಂದ್ರ ಎರಡ ಗಿಂಡಿ ಇಟ್ಟ್ಯಾಳ ||
ನಿನಗಿಬ್ಬರೇನ ಪುರುಷಽರ | ಕೋ॰ || ೨೩ ||

ಅಯ್ಯಯ್ಯ ಶಿವಶಿವ ಅನಕಽದ ಮಾತ್ಯಾಕೊ |
ಸರವ ಕೆಂಜೆಽಡಿ ಮಣಿಮುಕುಟ | ಕೋ॰ || ೨೪ ||

ಸರವಽನೆ ಕೆಂಜೆಽಡಿ ಮಣಿಮುಕುಟದೊಳಗಿನ ||
ಸಿರಿಗಂಗಾಗೊಂಡಽ ನಿನಗೊಂದ | ಕೊಂ | ೨೫ ||

ಗೊಬ್ಬೂರ ಹಾದೀಲಿ ಒಬ್ಬಯ್ಯ . ಬರತಾನ ||
ಅಬ್ಬರಣಿ ಗೌರಿಽ ಎಡಿಮಾಡ | ಕೋ॰ || ೨೬ ||

ಒಂದೆಡಿ ಮಾಡಂದ್ರ ಎರಡೆಡಿ ಮಾಡ್ಯಾಳ ||
ನಿನಗಿಬ್ಬರೇನ ಪುರುಷರ | ಕೋ || ೨೭ ||

ಅಯ್ಯಯ್ಯ ಶಿವಶಿವ ಅನಕದ ಮಾತ್ಯಾಕೊ ||
ಸರವ ಕೆಂಜೆಡಿ ಮಣಿಮುಕುಟ | ಕೋ || ೨೮ ||

ಸರವನೆ ಕೆಂಜೆಡಿ ಮಣಿಮುಕುಟದೊಳಗಿನ ||
ಸಿರಿಗಂಗಿಗೊಂದ ನಿಮಗೊಂದ | ಕೋ || ೨೯ ||

ಗಂಗೀನ ತಂದರ ತಂಗೀನ ತಂದಂಗ ||
ನಿಂಗವ ತಾರ ಬಡಿತೇನ | ಕೋ || ೩೦ ||

ಗಂಗಿನ ತಂದರ ತಂಗೀನ ತಂದಂಗ ||
ಖೆಂಡವ ತಾರ ಬಡಿತೇನ | ಕೋ || ೩೧ ||

*   *   *   *

ಬೆಳ್ಳಿ ಬಟ್ಟಲದಾಗ ಎಳ್ಳೆಣ್ಣಿ ತಕ್ಕೊಂಡು ||
ಗೌರ್ಯ್ಮೋದಳವನ ತೆಲಿ ಹೂಸ | ಕೋ || ೩೨ ||

ತೆಲಿಯಂಬ ಭಾಂವಕ ಒತ್ತ್ಯಾಳ ವರಿಸ್ಯಾಳ ||
ಟೊಂಕಂಬು ಭಾಂವಕಿಳಿದಾಳ | ಕೋ || ೩೩ ||

ಟೊಂಕೆಂಬೊ ಭಾಂವಕ ಒತ್ತ್ಯಾಳ ವರಿಸ್ಯಾಳ ||
ಪಾದಂಬ ಭಾಂವಕಿಳಿದಾಳ | ಕೋ || ೩೪ ||

ಪಾದಂಬೊ ಭಾಂವಕ ಒತ್ತ್ಯಾಳ ಒರಿಸ್ಯಾಳ ||
ನೆಲ ಸೋಸಿ ಗಂಗಿ ಹರಿದಾಳ | ಕೋ || ೩೫ ||

ಗಂಗ್ಯೋದ ಮರುದಿನ ಗೌರಿ ಮುಟ್ನಾದಾಳ ||
ಮಿಂದೆನಂದರ ನೀರಿಲ್ಲ | ಕೋ || ೩೬ ||

ಮಿಂದೇನು ಅಂದರ ನೀರಿಲ್ಲ ಶಿವರಾಯಾ ||
ಹಾಲಿನ ಕ್ಷಡಾ ಖಳವ್ಯಾನ | ಕೋ || ೩೭ ||

ಹಾಲೀಲಿ ಮೀಂದಿದರ ಹೋಗಸವು ಮುಡಚಾಟ ||
ತಂಗಿ ಗಂಗಮನ ಖಳವಸರಿ | ಕೋ || ೩೮ ||

ಗಂಗ್ಯೋ್ಯೀದ ಮರದಿನ ಗೌರಿ ಮುಟ್ನಾದಾಳ ||
ಮಿಂದೇನಂದಾರs ನೀರಿಲ್ಲ | ಕೋ || ೩೯ ||

ಮೀಂದೇನು ಅಂದsರ ನೀರಿಲ್ಲ ಶಿವರಾಯಾ ||
ತುಪ್ಪsದ ಕ್ಸಡಾ ಖಳವ್ಯಾನ | ಕೋ || ೪೦ ||

ತುಪ್ಪೀಲಿ ಮಿಂದಿದರ ಹೋಗಸವ ಮುಡಚಾಟ ||
ತಂಗಿ ಗಂಗಮನ ಖಳುವsರಿ | ಕೋ || ೪೧ ||

---

## ಗಂಗೀ ಗೌರೀ ಹಾಡು

( ೨ )



ಅಡವಿಯನ್ನಿ ಮರನೆ
ಗಿಡವ ಬನ್ನಿ ಮರನೆ
ಅಡವ್ಯಾಗ ಇರುವಂಥ
ಸಾರಂಗ ಸರದೂಳಿ
ಹೆಬ್ಬುsಲಿ ಹುಲಿಕರಡಿ
ಎಡಬಲ ಹಾಂವು ತೇಳೋ ದೇವಾ |
ಎನ್ನ ಮೇಲಾಡಿ ಶ್ರೀಗಂಗೀನ ತಂದಿ |
ಎನ್ನ ತಪ್ಪೇನು ಕಂಡಿ ||೧||

ಪಟ್ಟಣದ ದಾರಿ ಮ್ಯಾಲ
ಹಿಟ್ಟಗಲ್ಲಿನ ಮ್ಯಾಲ
ಕತ್ತಿsಯ ವರಿಯಂಗ
ವರಿಯವರು ಇದ್ದಲ್ಲಿ

ಇಪ್ಪತ್ತು ಗಾಂವುದ ತಪಸಿದ್ಯೋ ದೇವಾ
ಎನ್ನ ಮೇಲಾಡಿ ಶ್ರೀಗಂಗೀನ ತಂದಿ।
ಎನ್ನ ತಪ್ಪೇನು ಕಂಡಿ ॥ ೨ ॥

ಸಾರಂಗ ವಾರಿಮ್ಯಾಲ
ಸಾಲಗಲ್ಲಿನ ಮ್ಯಾಲ
ಭೂಜಿಸಯ ಮಣಿಯಂಗ
ಮಣಿಯವರು ಇದ್ದಲ್ಲಿ
ನಾಲ್ವತ್ತು ಗಾಂವುದ ತಪಸಿದ್ಯೋ ದೇವಾ
ಎನ್ನ ಮೇಲಾಡಿ ಶ್ರೀಗಂಗೀನ ತಂದಿ।
ಎನ್ನ ತಪ್ಪೇನು ಕಂಡಿ ॥ ೩ ॥

ತನುವ ಇಲ್ಲದ ಗಂಗಿ
ಧಣ್ಣೀರಿಗ್ಹೋದಾಗ
ಸಿಂಬಿಹಣ್ಣಿನಂಗ
ತುಂಬಿಸಪ ಕುಚಗಳು
ಬಂದ ಕುಂತಾಳ ಜಡಿಯೊಳಗೋ ದೇವಾ
ಎನ್ನ ಮೇಲಾಡಿ ಶ್ರೀಗಂಗೀನ ತಂದಿ।
ಎನ್ನ ತಪ್ಪೇನು ಕಂಡಿ ॥ ೪ ॥

ಒಟ್ಟಿಸದ ಭಣವಿಸಗಿ
ಓಚಗುಳ್ಳ ಬಿದ್ದಂಗ
ಮುತ್ತಿನಸ ರಾಸಿಸಗಿ
ಕಳ್ಳರು ಬಿದ್ದಂಗ
ಚಿಕ್ಕಂದಿನೊಗತಾನಾ
ಮತ್ತೊಬ್ಬಿಗಾಯ್ತುಂದ
ಹೊಟ್ಯಾಗ ಭೆಂಕಿ ಬರಕ್ಯಾದೋ ದೇವಾ
ಎನ್ನ ಮೇಲಾಡಿ ಶ್ರೀಗಂಗೀನ ತಂದಿ।
ಎನ್ನ ತಪ್ಪೇನು ಕಂಡಿ ॥ ೫ ॥

# ಕೂಸಿನ ಹಾಡು

ಕೂಸ ಕೂಸೆಂದೇನ ಕುಂದಲದ್ದರಳಿಗಿ ।
ಮಂಡಲದಾಗಾಡೊ ಮಗನ ಗೋವಿಂದಾ ॥
ಕೂಸ ಕಂಡಿರೇ । ಅವ್ವ ನನ್ನ ।
ಬಾಲನ ಕಂಡಿರೆ ॥ ೧ ॥

ಸಣ್ಣಾಗಿ ಬೀಸಿದ ಸಂಣ್ಣಲ್ಲಿ ಮಾಡಿದ ।
ಬೆಣ್ಣೆಚ್ಚಿ ರೊಟ್ಟೀ ನಾ ಕುಡುವೆನವ್ವಾ ॥
ಕೂಸ ಕಂಡಿರೇ । ಅವ್ವ ನನ್ನ ।
ಬಾಲನ ಕಂಡಿರೆ ॥ ೨ ॥

ಹಸರಂಗಿ ತೊಡಿಸಿದ ಹಾಲಗಡಗ ಇಡೆಸಿದ ।
ಕುಸಲದ ಟೊಪ್ಪಿಗಿ ತೆಲಿಮ್ಯಾಲಿತ್ತವ್ವಾ ॥
ಕೂಸ ಕಂಡಿರೆ । ಅವ್ವ ನನ್ನ ।
ಬಾಲನ ಕಂಡಿರೆ ॥ ೩ ॥

ಭಾಂಯಿ ಮ್ಯಾಲ ನಿಂತಿತ್ತು ಬಾಯಿ ಮಾಡಿ ಅಳತಿತ್ತು ।
ಕಂಡ ಬಾಲ್ಯಾರಿಗಿ ಕೈಮಾಡಿತವ್ವಾ ॥
ಕೂಸ ಕಂಡಿರೆ । ಅವ್ವ ನನ್ನ ।
ಬಾಲನ ಕಂಡಿರೆ ॥ ೪ ॥

ಬಿಳಿ ಅಂಗಿ ತೊಡಸಿದ ಬಿಳಿಮುತ್ತನಿಡಸಿದ ।
ಅಂಗಳದಾಗ ಕೂಸಾ ಮಾಯಾಯಿತವ್ವಾ ॥
ಕೂಸ ಕಂಡಿರೆ । ಅವ್ವ ನನ್ನ ।
ಬಾಲನ ಕಂಡಿರೆ ॥ ೫ ॥

ಗಂಡಹೆಂಡರು ಕೂಡಿ ಖಂಡಗ ಹರಕೀ ಮಾಡಿ ।
ನಾ ಗಂಡಸಮಗನ ಹಡದಿದ್ದನವ್ವಾ ॥

ಕೂಸ ಕಂಡಿರೆ। ಅವ್ವಾ ನನ್ನ ।
ಬಾಲನ ಕಂಡಿರೆ ॥ ೬ ॥

ಜನವ ಜಾತ್ರಿಗ್ಹೋಯ್ತ ನಾನೂ ಜಾತ್ರಿಗ್ಹ್ಯಾವದ ।
ಜನಕಿಲ್ಲದ ಕೇಡಾ ನನಗಾಯಿತವ್ವಾ ॥
ಕೂಸ ಕಂಡಿರೆ । ಅವ್ವಾ ನನ್ನ ।
ಬಾಲನ ಕಂಡಿರೆ ॥ ೭ ॥

## ಎತ್ತಿನ ಹಾಡು

ಮಾಗಿಯ ಹೊಡಿಯಾಗ
ನನ ಕೈಲೆ ಮಾಯದಿಂದ ಮಾಡಿಸಿಕೊಂಡ್ಯಾ
ನಾ ಹೋಗಿ ಒಂದ
ತೆನಿಧಂಟ ತಿಂದರ
ಕಲ್ಲಕಲ್ಲಿಲೆ ಹೊಡದ್ಯೊ। ನನು ಜೀವ ಹೋದಾವೊ
ಕೈಲಾಸಕ ॥ ೧ ॥

ನಾ ಒಂದ ಬಿತ್ತಿದ ನಾ ಒಂದ ಬೆಳದೀದ
ನಾ ಹೋಗಿ ಒಂದ
ಹೊಡೆಧಂಟ ತಿಂದರ
ಬಡಬಡಗಿಲೆ ಹೊಡದ್ಯೊ। ನನು ಜೀವ ಹೋದಾವೊ
ಕೈಲಾಸಕ ॥ ೨ ॥

ಹತ್ತಿಕಾಳ ಕುಡು ಅಂದ್ರ
ಸಿನ ಮಡದಿ ಅತ್ತ ಮಾರಿ ತಿರುವ್ಯಾಳ
ಹತ್ತಗೊಳಗ ತಿನ್ನಂದ್ರ
ಖಂಡಗ ತಿನ್ನುವ

ತುಂಡಿನಽ ತಂದ್ಕೊಡೊ | ನಮ ಜೀವ ಹೋದಾವೊ
ಕೈಲಾಸಕ || ೩ ||
ಹಿಂಡಿಽಯ ಕುಡು ಅಂದಽ
ನಿನ ಪಡದಿ ಮೂಗನೆ ಮುರದಾಳ
ಖಂಡಽಗ ತಿನ್ನಂದ್ರ
ಇಖ್ಖಂಡ್ಗ ತಿನ್ನಂಧ
ತುಂಡಿನಽ ತಂದ್ಕೊಡೊ | ನಮ ಜೀವ ಹೋದಾವೊ
ಕೈಲಾಸಕ || ೪ ||

ಇಕ್ಕಿದರ ಹೇಂಡಿನಾದಿನಽ | ಹಚ್ಚಿದರ ಕುಳ್ಳನಾದಿನಽ
ದೇವಽರ ಮುಂದಿಽನ
ಪರಸಾದ ನಾ ಆದ
ಮತ್ತ್ಯಾತಕಾದೇನಽ | ನಮ ಜೀವ ಹೋದಾವ
ಕೈಲಾಸಕ || ೫ ||
ಸತ್ತರ ತೊಗಲಾದೆನಽ | ಮೆಟ್ಟಿದರ ಕೆರವಾದೆನಽ |
ಹೆಗಲ ಮ್ಯಾಲಾಡಂತ
ಬಾರಕೋಲ ನಾ ಆದ
ಮತ್ತ್ಯಾತಕಾದೇನ | ನಮ ಜೀವ ಹೋದಾವ
ಕೈಲಾಸಕ || ೬ ||

---

# ಮಳೀ ಹಾಡು

ಬಣ್ಣದ ಗುಬ್ಬ್ಯಾರು ಮಳಿರಾಜಾ | ಅವರು |
ಮಣ್ಣಾಗಿ ಹೋದರು ಮಳಿರಾಜಾ ||
ಬಣ್ಣದ ಗುಬ್ಬ್ಯಾರು ಮಣ್ಣಾಗಿ ಹೋದರು
ಅನ್ಯದ ದಿನ ಬಂದು ಮಳಿರಾಜಾ || ೧ ||

ಒಕ್ಕಲಗೇರ್‍ಯಾಗ ಮಳಿರಾಜಾ । ಅವರು ।
ಮಕ್ಕಳು ಪಾರ್‍ಯಾರ ಮಳಿರಾಜಾ ॥
ಮಕ್ಕಳ ಮಾರಿಗೆ ರೊಕ್ಕಾ ಹಿಡಕೊಂಡು
ಭತ್ತಂಡಿs ತಿರಗ್ಯಾರ ಮಳಿರಾಜಾ ॥ ೨ ॥

ಸೊಲಗಿ ಹಿಟ್ಟಿನಾಗ ಮಳಿರಾಜಾ । ಅವರು ।
ಸುಣ್ಣಾನ್ನು ಕೂಡಿಸ್ಯಾರ ಮಳಿರಾಜಾ ॥
ಹಸ್ತು ಬಂದಕೇರಿ ಗಪಗಪ ತಿಂದು
ಒದ್ದ್ಯಾಡಿ ಸತ್ತಾರ ಮಳಿರಾಜಾ ॥ ೩ ॥

ಗಿದ್ದನ ಅಕ್ಕ್ಯಾಗ ಮಳಿರಾಜಾ । ಅವರು ।
ಅಪ್ಪುವನ್ನು ಕೂಡ್ಸ್ಯಾರ ಮಳಿರಾಜಾ ॥
ಸಣ್ಣ ಕೂಸಿಗಿ,ಮನ್ನಿಸಿ ಉಣಿಸ್ಯಾರ
ಕಣ್ಣಾನ್ನೆ ಮುಚ್ಚ್ಯಾವ ಮಳಿರಾಜಾ ॥ ೪ ॥

ಗಂಡುಳ್ಳ ಬಾಲ್ಯಾರು ಮಳಿರಾಜಾ । ಅವರು ।
ಭಿಕ್ಷ್ಯಾಕ ಹೊರಟಾರ ಮಳಿರಾಜಾ ॥
ಗಂಡುಳ್ಳ ಬಾಲ್ಯಾರು ಭಿಕ್ಷ್ಯಾಕ ಹೋದರು
ಅನ್ಯದ ದಿನ ಬಂದು ಮಳಿರಾಜಾ ॥ ೫ ॥

ಸ್ವಾತಿsಯ ಮಳಿ ಬಂದು ಮಳಿರಾಜಾ । ಸುತ್ತ ।
ದೇಶಾಕ ಆಗ್ಯಾದ ಮಳಿರಾಜಾ ।
ಹಳ್ಳಕೊಳ್ಳ ಹೆಣ ಹರಿದಾಡಿ ಹೋದವು
ಯಾವಾಗ ಬಂದೆಪ್ಪಾ ಮಳಿರಾಜಾ ॥ ೬ ॥

# ಆಕಳ ಹಾಡು

ತಾಯ್ ಹೊಟ್ಟಿ ತಂಗಾಲಿ ತಾಯಿರಲಿ ದ್ರೌಪತಿ |
ನೀಲಗೊಂಡೀದ ನಿರವೀರ | ಬಾಲನ ಮ್ಯಾಲ |
ಶ್ರೀರಾಮರಿದ್ದಾರೊಂದಗಲಾದೆ || ೧ ||

ಎಂದೀಗಿ ಈ ಹಾಡ ಹೋಂದಿಸ್ತಿದ್ದಾರೆಂದು |
ಅಂಗಳಕ ಬಂದು ತಿರಗೀನೆ | ಹ್ವಾದವರು |
ಹಾಳು ದೇಗುಲದ ಕದವಾಗೆ || ೨ ||

ಎಂದೀಗಿ ಈ ಹಾಡ ಹೋಂದಿಸ್ತಿದ್ದಾರೆಂದು |
ಬಾಗಿಲಿಗಿ ಬಂದು ತಿರಗೀನೆ | ಹ್ವಾದವರು |
ಹಾಳ ಹಿತ್ತಲದ ಕದವಾಗೆ || ೩ ||

* * * *

ಪಟ್ಟೋಳಿ ಗುಡಿ ತಂದು ಕಟ್ಟ್ಯಾರ ನಡುಮನಿ |
ಸುತ್ತ ಸಾರುಬಾಪ ಹೊಳಿಯುಬಾವ | ಗುಡಿಗೋಳು |
ಕಟ್ಯಾರ ಬವಲಿ ನಡುಮನಿಯ || ೪ ||

ರೊಕ್ಕಸ್ತ್ರ ಗುಡಿ ತಂದು ಕಟ್ಟ್ಯಾರ ನಡುಮನಿ |
ಸುತ್ತ ಸಾರುಬಾವ ಹೊಳೆಯುಬಾವ | ಗುಡಿಗೋಳು |
ಕಟ್ಟ್ಯಾರ ಬವಲಿ ನಡುಮನಿಯ || ೫ ||

ತಪ್ಪಾನೆ ಈ ಕಾಲ ತಪ್ಪಾನೆ ತೊಯ್ದ್ಯಾವ |
ಮುತ್ತ ಸುರದಂಗ ಬೆಪತಾಳ | ಬವಲಿ ತಾ |
ಪುತ್ರಬಾನ ಈಗ ಹಡದಾಳ || ೬ ||

ತಪ್ಪಾನೆ ಈ ಕಾಲ ತಪ್ಪಾನೆ ತೊಯ್ದ್ಯಾವ |
ಹವಳ ಸುರಿದಂಗ ಬೆಪತಾಳ | ಬವಲಿ ತಾ |
ಕಂದಬಾನ ಈಗ ಹಡದಾಳ || ೭ ||

ಉಚ್ಚ್ಯಾಯ ದಿನದಲ್ಲ ದಡ್ಡಿಽಯ ಉಡುಗೂಸಿ ।
ಉಪ್ಪ ಅಂಬೀಲ ಕರಿಯ ಜೀವನೆ ತರಿಸಿ ।
ಕೇಂಚಽಲ ವ್ಯಾಲ ಇಳಿವ್ಯಾರ ॥ ೮ ॥

ಹಾಲಾನೆ ತರಸ್ಯಾರ ಗಿಣ್ಣಾನೆ ಕಾಸ್ಯಾರ ।
ತಂದಿಟ್ಟ್ಯಾರ ಪುಸಿಯ ನಡುಮುಸಿಯ ।
ಬಾಳಽಯ ಎಲಿ ಹಾಸಿ ಆಳ ಗೌವಳರೆಲ್ಲಾ ।
ಉಂಡಾರ ಗಿಣ್ಣ ಜನರೆಲ್ಲಾ । ಸರುರೆಲ್ಲಾ ।
ಬಾಲನ ತಾಯಿ ಸುಖಿಸಿರಽ ॥ ೯ ॥

ನಿಂಬಿಽಯ ಎಲಿ ಹಾಸಿ ಇಂದರ ಗೌಪಳರೆಲ್ಲಾ ।
ಉಂಡಾರ ಗಿಣ್ಣ ಜನರೆಲ್ಲಾ । ಸರುರೆಲ್ಲಾ ।
ಕಂದಽನ ತಾಯಿ ಸುಖಿಸಿರಽ ॥ ೧೦ ॥

ಅತ್ತಿಽಯ ಎಲಿ ಹಾಸಿ ಸುತ್ತಿನ ಗೌವಳರೆಲ್ಲಾ ।
ಉಂಡಾರ ಗಿಣ್ಣ ಜನರೆಲ್ಲಾ । ಸರುರೆಲ್ಲಾ ।
ಪುತ್ರನ ತಾಯಿ ಸುಖಿಸಿರಽ ॥ ೧೧ ॥

ಮುತ್ತಿಽನ ಆರುಽತಿ ಮುನಿಯ ತಂವೆತ್ತೀದಾ ।
ಲಕ್ಷಽಣವಂತಿ ಗುಣವಂತಿ । ಬವಲಿ ತಾ ।
ಹೊಕ್ಕೊಮ್ಮ ಬಾರ ಹೊಲಗೋಳ ॥ ೧೨ ॥

ಬರದ ಬತ್ತಿಸಿದಂತಾ ಕರಚೆಲುವಿ ಬವಲಿ ತಾ ।
ತೊರದ ಹಿಮ್ಮಾಲಿ ಕೆಲಕು ಹೊತ್ತಲಿ ತನ್ನ ।
ಪರದಕ್ಷದಿಂದ ನಡದಾಳ ॥ ೧೩ ॥

ಮುಂದ ಹಿಂಡಽನ್ಯಾಕಿ ಹಿಂದ ತಾ ಆಗ್ಯಾಳ ;
ಹಿಂಗೆಚ್ಚಲವ್ವ ಬಳಲ್ದೀವಿ । ಬವಲಿ ತಾ ।
ಹ್ವಾದಾಳ ಬಾವಂಜಿ ಬನದಾಽಗ ॥ ೧೪ ॥

ಒಳಿಯ ಒಳಿಯಾಕ್ಹೋಗಿ ಹೊಡಿಯ ಹುಲ್ಲನೆ ಮೆಯ್ದು |
ಹಿರಿದೊಂದು ಕಿರಿದೊಂದು ತೆನಿಯ ಹುಲ್ಲನೆ ಮೆಯ್ದು |
ಕೆಂಚಲ ತುಂಬಿ ಬಿಗಿದಾವ || ೧೫ ||

ಒಳಿಯ ಒಳಿಯಾಕ್ಹೋಗಿ ಹೊಡಿಯ ಹುಲ್ಲನೆ ಮೆಯ್ದು |
ಒಪ್ಪುಳ್ಳ ಕೊಡವ ತಿಳಿಯ ನೀರನೆ ಕುಡಿದು |
ಕೆಂಚಲ ತುಂಬಿ ಬಿಗಿದಾವ || ೧೬ ||

ಮುಂದ ಹಿಂಡನ್ಹಾಕಿ ಹಿಂದ ತಾ ಆದಾಳ |
ಏರೊಮ್ಮೆ ಇಳಿದು ಬರುವಾಗ |
ನಾರಿ ಕಂಡಾಳ ಹುಲಿಗೋಳ || ೧೭ ||

ಎಲ್ಲೀದು ಹುಲ್ಲೀದು ಎಲ್ಲೀದು ನೀರಿದು |
ಎಲ್ಲೆನ್ನ ಇದಿಯು ಎಳೆದೆನ್ನ ತಂದೀತು |
ಕಂದನ ಇಂದು ಅಗಲೀವ || ೧೮ ||

ಎತಲೀದು ಹುಲ್ಲೀದು ಎತಲಿಂದು ನೀರಿದು |
ಎತಲೆನ್ನ ಇದಿಯು ಎಳೆದೆನ್ನ ತಂದೀತು |
ಪುತ್ರನ ಇಂದ ಅಗಲೀವ || ೧೯ ||

ಬಾಲಗ ಮಲಿಕೊಟ್ಟು ಬಂದೀನು ನಾ ಈಗ |
ಬಾಳಿಯ ಬನದ ತನವಿನಲ್ಲಾಡಂತ |
ಬಾಲಯ್ಯನಾಣಿ ಹುಸಿಯಲ್ಲ || ೨೦ ||

ಕಂದಗ ಮೊಲಿಕೊಟ್ಟು ಬಂದೀನು ನಾ ಈಗ |
ನಿಂಬಿಯ ಬನದ ತನವಿನಲ್ಲಾಡಂತ |
ಕಂದಯ್ಯನಾಣಿ ಹುಸಿಯಲ್ಲ || ೨೧ ||

ಪುತ್ರಗ ಮೊಲಿಕೊಟ್ಟು ಬಂದೀನು ನಾ ಈಗ |
ಅತ್ತಿಯ ಬನದ ತನವಿನಲ್ಲಾಡಂತ |
ಪುತ್ರಯ್ಯನಾಣಿ ಹುಸಿಯಲ್ಲ || ೨೨ ||

*　　*　　*

ಅಕ್ಕತಂಗೆರು ನೀವು ಒಪ್ಪಿಲಿ ಬರುವುದು ಕಂಡು ।
ನನ್ನ ಕೋಮಾರ ಅರಬಕ್ಷಿ ಪರಬಕ್ಷಿ ।
ಒಬ್ಬರೊಂದೀನ ಮಲಿಗೊಳ್ಳs ॥ ೨೩ ॥

ತಾಯಿ ಮಕ್ಕಳ ನೀವು ಚ್ಯಾಯಲಿ ಬರುವುದು ಕಂಡು ।
ನನ್ನ ಕೋಮಾರ ಅರಬಕ್ಷಿ ಪರಬಕ್ಷಿ ।
ಒಬ್ಬರೊಂದೀನ ಮಲಿಗೊಳ್ಳs ॥ ೨೪ ॥

*　　*　　*

ಬೇಲಿಮ್ಯಾಲೀನ್ಹುಲ್ಲಿ ಚಾಯದಲೆಯ್ಯಾವೆಂದು ।
ಹೋಗಿ ಮೆಲಿಬ್ಯಾಡ ಬಾಲ ಮಲ್ಲಿಗಿ ನಿನ್ನ ।
ನಾಲೀಗ್ಗಿ ಮುಳ್ಳ ಮುರದಾsವ ॥ ೨೫ ॥

ಹುತ್ತಿನ ಮ್ಯಾಲೀನ್ಹುಲ್ಲಿ ಹಚ್ಚಗೆಯ್ಯಾವೆಂದು ।
ಹೋಗಿ ಮೆಲಿಬ್ಯಾಡ ಬಾಲಮಲ್ಲಿಗಿ ನಿನ್ನ ।
ಕುತ್ತೀಗಿ ಸರಪ ಹರದಾsವ ॥ ೨೬ ॥

ಭಾಂವಿ ಮ್ಯಾಲಿನ ಹುಲ್ಲ ಚಾಯದಲೆಯ್ಯಾವೆಂದು ।
ಹೋಗಿ ಮೆಲಿಬ್ಯಾಡೊ ಬಾಲಮಲ್ಲಿಗಿ ನಿನ್ನ ।
ಕಾಲ ಜಾರಿದರ ಮುಣಗೀಯೊ ॥ ೨೭ ॥

ಇಷ್ಟನೆಲ್ಲಾ ಹೇಳಿ ನೀ ಎಲ್ಹೋಗುತಿ ತಾಯಿ ।
ನೀ ಹ್ವಾದಲಿ ನಾನು ಬರುವೆನ ।
ನೀ ಹ್ವಾದಲಿ ನಾನು ಬರುವೆsನ ಅಂದsರ ।
ದಾವ್ರಾಣಿ ಕುಣಕಿ ಸಡಲ್ಯಾವ ॥ ೨೮ ॥

ಮುಂದ ಹಿಂಡsನ್ಹಾಕಿ ಹಿಂದ ತಾನಾದಾಳ ।
ಹಿಂಗೆಚ್ಚಲವ್ವ ಬಳಲ್ದೀವಿ । ಬವಲಿ ತಾ ।
ಹ್ವಾದಾಳ ಬಾವಂಜಿ ಬನದಾಗ ॥ ೨೯ ॥

ಮಲಗಿರುವ ಹುಲಿರಾಜನ ತೊಡಿ ಬಡೆದು ಎಬ್ಬಿಸಿ ।
ಅನ್ಯಾಯವನಾಡದೆ ಕರತಿನ್ನಿ ।
ನನ್ನಪ್ಪ ನನ ತಾಯಿ ನಾ ನಿನ್ನ ತಿನಲಾರ
ಇನ್ನಾರ ತಿಂಗಳುಪ್ಪಾಸ ॥ ೩೦ ॥

ಹುಲಿರಾಜ ಬಳಲ್ದೇವಿ ಏಕಾಂತ ಮಾತಾಡಾಗ ।
ಊದೂವ ಶಂಖ ಹರಿ ಕೂಗಿ ಬಂದಾವ ।
ಖ್ಯಾತೆ ಬಳಲ್ದೇವಿ ಇದಿರ್ಗೊಳ್ಳ ॥ ೩೧ ॥

---

# ಎಳ್ಳಾವಮಾಸೀ ಹಾಡು



ಪರಸೀಗಿ ಬರವ್ಹೂದು ।
ನರಸವ್ವ ಎಳ್ಳಾವಮಾಸಿ । ಕೋಲಣ್ಣ ಕೋಲ ॥ ೧ ॥

ಏಳ ಮಂದಿ ನೆಗೇಣಿ ಮಕ್ಳು ॥
ಬೆಳ್ಳ ಬೆಳಗಾಽನ ಏಳ್ರಿ । ಕೋ ॥ ೨ ॥

ಬೆಳ್ಳ ಬೆಳಗಾಽನ ಏಳ್ರಿ ।
ಮನಿಮಾರ ಸಾರಿಸರೆವ್ವಾ । ಕೋ ॥ ೩ ॥

ಮನಿಮಾರ ಸಾರಿಸರೆವ್ವಾ ।
ತಲಿಯಾರೆ ಎರಕೋರೆವ್ವಾ । ಕೋ ॥ ೪ ॥

ಕಾಯ್‌ಪಲ್ಲ್ಯಾ ಸೋಸರೆವ್ವಾ ।
ಅಡಿಗೆಂಬಲಿ ಮಾಡರೆವ್ವಾ । ಕೋ ॥ ೫ ॥

ಅಡಿಗೆಂಬಲಿ ಮಾಡರೆವ್ವಾ ।
ಹೆಡಗಿ ಬುಟ್ಟಿ ತುಂಬರೆವ್ವಾ । ಕೋ ॥ ೬ ॥

ಸಣ್ಣಕ್ಕಿ ನಾಗುಬಾಯಿ |
ಮನಿಮಾರ ಜ್ವಾಕಿನವ್ವಾ | ಕೋ ||೭||

ಮನಿಮಾರ ಜ್ವಾಕಿನವ್ವಾ |
ಕರ ಬಿಟ್ಟು ಕರ ಕಟ್ಟು | ಕೋ ||೮||

ಕರ ಬಿಟ್ಟು ಕರಕಟ್ಟುಟಿಗೆ |
ಕರ ಹೊಯ್ತು ರಾಜಬೀದಿಗಿ | ಕೋ ||೯||

ಪಟ್ಟನೆ ನಾಲ್ಯಾಗ |
ಸೆಟ್ಟಿ ಸಾವುಕಾರರ ಮಗನ | ಕೋ ||೧೦||
ಸೆಟ್ಟೀನೆ ಸಾವುಕಾರನ |
ಮಗನ ಆಕೀ ಮ್ಯಾಲ | ಕೋ ||೧೧||

ಬಿರಿಬಿರಿ ಹೋಗ್ಯಾನ |
ಮನಿಯಾಗ ಮನಗ್ಯಾನ | ಕೋ ||೧೨||

ಏನ ಬ್ಯಾನೆವ್ವಾ ಮಗನ |
ಎಂತ ಬ್ಯಾನೆವ್ವಾ ಮಗನ | ಕೋ ||೧೩||

ಏನ ಬ್ಯಾನಿಲ್ಲ ತಾಯಿ |
ಎಂತ ಬ್ಯಾನಿಲ್ಲ ತಾಯಿ | ಕೋ ||೧೪||

ಕಳಸೆಟ್ಟ್ಯವರ ಸೊಸಿ ಮ್ಯಾಲ |
ನನ ಮನಸ ಹೋಗ್ಯಾದ ತಾಯಿ | ಕೋ ||೧೫||

* * * *

ಏಳ್ಮಂದಿ ನೆಗೇಣಿ ಮಕ್ಳ್ಯಾ |
ಮುತ್ತೈದಿತನ ಹೇಳ್ತೈವ್ರಿ | ಕೋ ||೧೬||

ಸಣ್ಣಕ್ಕಿ ನಾಗುಬಾಯಿಗಿ |
ನಣ ಹೊಡೆದು ಹೆಣಾಹಾಕಿ | ಕೋ ||೧೭||

ಸಟ್ಟಿ ಸರವತ್ತಸಾಗ ।
ಹಿಂದಽಕ ಮುಂದಽಕ । ಕೋ॰ ॥ ೧೮ ॥

ಆರು ಮಂದಿ ನೆಗೆಣಿ ಮಕ್ಕ್ಯಾಳ್ರಿ ।
ಮುಂಜಾಳೆದ್ದು ಬರತಾಳ್ಹೋಗ್ರೆ । ಕೋ॰ ॥ ೧೯ ॥

* * * *

ಸಟ್ಟಿ ಸರವಽತಸಾಗ ।
ಮೈಯ್‌ಮುಟ್ಟಿ ಕೈಯ ಮುಟ್ಟಿ । ಕೋ॰ ॥ ೨೦ ॥

ಕೊರಳಾನ ಪುತಳಿ ಸರ ।
ಹರದ ದಿಕಪಾಲ ಮಾಡಿ । ಕೋ॰ ॥ ೨೧ ॥

ಸಮ್ಮತ್ತ್ರಿ ಬೈತಾಳ ।
ಪೋಣಿಕೊಡರಿ ಸಮಗ । ಕೋ॰ ॥ ೨೨ ॥

ಮುಂದ ಮುಂದ ಪೋಣಸ್ತ ।
ಹಿಂದ ಹಿಂದ ಉಚ್ಚ್ಯಾಳ । ಕೋ॰ ॥ ೨೩ ॥

ಇಟ್ಟನೆ ಆಽಗಟಿಗೆ ।
ಬೆಳ್ಳಬೆಳಗಾಽನೆ ಆಗಿ । ಕೋ॰ ॥ ೨೪ ॥

* * * *

ಕಾಲಮಡಿ ಬಂದಿದಾಽವ ।
ಬಾಗಿಲ ತೆರೀರಿ ಸಮಗ । ಕೋ॰ ॥ ೨೫ ॥

ಬರತೇನಿ ಅಂಽತ್ಹೇಳಿ ।
ಭಾವ್ಯೇರಿ ಕೊಟ್ಹೋಗ । ಕೋ॰ ॥ ೨೬ ॥

ಎದಿಯ ಮ್ಯಾಲಿಽನ ಸೆರಗ ।
ಆತನ ಕೈಯಽಲಿ ಕೊಟ್ಟ । ಕೋ॰ ॥ ೨೭ ॥

ಒಂದ ಪಾಟಽಣಗಿಳದಾಳ ।
ಒಂದ ನಿಲಗಿ ಉಚ್ಚ್ಯಾಳ । ಕೋ॰ ॥ ೨೮ ॥

ಎಡ್ಡ ಪಾಟುಣಗಿsಳದಾಳ |
ಎಡ್ಡ ನಿಲಗಿ ಉಚ್ಚ್ಯಾಳ | ಕೋ ‖ ೨೯ ‖

ಮೂರ ಪಾಟುಣಗಿsಳದಾಳ ‖
ಮೂರ ನಿಲಗಿ ಉಚ್ಚ್ಯಾಳ | ಕೊ ‖ ೩೦ ‖

ಸಾಕೇಂಬು ಪಾsಟುಣಗಿ |
ಎಮ್ಮೀ ಖೋಂಡೀಗಿ ಸಿಗಸಿ | ಕೋ ‖ ೩೧ ‖

*    *    *    *

ಅತ್ತೆವ್ವಾ ಅತ್ತೆವ್ವಾ ‖
ಬಾಗೀಲ ತೆರೀರಿ ಸವುಗ | ಕೋ ‖ ೩೨ ‖

ಸಟ್ವಿ ಸರವತ್ತನಾಗ ‖
ದೆವ್ವಿದ್ಯಾ ಭೂತಿದ್ಯಾ | ಕೋ ‖ ೩೩ ‖

ದೆವ್ವಿಲ್ಲ ಭೂತಿಲ್ಲ ‖
ಸಣ್ಣಕಿ ನಾಗೂಬಾಂಯಿ | ಕೋ ‖ ೩೪ ‖

*    *    *

ಕಳಸೆಟ್ಟೆವರ ಮನೀsಮುಂದ ‖
ಜಂಬ ನೀಲsದ ಹಣ್ಣ | ಕೋ ‖ ೩೫ ‖

ಕೈಗ್ಯಾದರು ಬಂದsವ ‖
ಬಾಯಿಗ್ಯಾದರ ಬರಲಿಲ್ಲ | ಕೋ ‖ ೩೬ ‖

---

# ಅಕ್ಕ ಮಹಾದೇವಿಯ ಹಾಡು



ಅಂಕ ಬಂಕsದವನ | ಟೊಂಕಿನ ವ್ಯಾಲ ಕೈsಯಿಟ್ಟು |
ಡೊಂಕs ನಿಂತಾನ ಇವನ್ಯಾರ | ಕೋಲೆಣ್ಣ ಕೋಲ ‖ ೧ ‖

ಅವ ನನ್ನ ಅಣ್ಣಾವ। ಅವ ನನ್ನ ತಮ್ಮನ।
ಅವ ನನ್ನ ಊರ ಒಡಿಯನ। ಕೋ ॥ ೨ ॥

ಅವ ನನ್ನ ಊರ। ಒಡಿಯನ ನನ್ನ ಮಗಳ।
ಅವನಿಗಿ ನಿನಗ ಕೊಡತೀನ। ಕೋ ॥ ೩ ॥

ನೀವು ಜಯನರು। ನಾವು ನಿಂಗೋತರು।
ಕೊಟ್ಟರೊಲ್ಲೀನ ಜಯನರಿಗಿ। ಕೋ ॥ ೪ ॥

ಶಾವಿಗಿನಾಗತಾವ। ಸೈದಾನನಾಗತಾವ।
ಇಂದ್ಯಾನ ಇವರ ಮನಿಯಾಗ। ಕೋ ॥ ೫ ॥

ಇಂದ ಯಾನ ಇವರ। ಮನಿಯಾಗ ಹಡದವ್ವ।
ಅವ್ವನೌವ್ವತ್ತ ದಿನಗಳ। ಕೋ ॥ ೬ ॥

ಹಪ್ಪಳನಾಗತಾವ। ಶಿಂಡಿಗಿನಾಗತಾವ।
ಇಂದ್ಯಾನ ಇವರ ಮನಿಯಾಗ। ಕೋ ॥ ೭ ॥

ಇಂದ ಯಾನ ಇವರ। ಮನಿಯಾಗ ಹಡದವ್ವ।
ಅಪ್ಪನವ ನತ್ತ ದಿನಗೋಳ। ಕೋ ॥ ೮ ॥

* * * *

ನಸ್ಸೂರ ಹಾದಿಂಲಿ। ನಿಬ್ಬಣ ಬರತದ।
ನೀ ಏರಿ ನೋಡ ನನ ಮಗಳ। ಕೋ ॥ ೯ ॥

ನಾ ಏರಿ ನೋಡಲಕ। ನನ್ನ ತವರಲ್ಲ।
ನೀ ಏರಿ ನೋಡ ಹಡದವ್ವಾ। ಕೋ ॥ ೧೦ ॥

ಎಣ್ಣಿಯ ಕೊಡಗೋಳು। ಬಣ್ಣದಲಿ ಬರೂತಾವ।
ಮಣ್ಣಾಗ ಬಿದ್ದು ಒಡಿಯಲಿ। ಕೋ ॥ ೧೧ ॥

ಮಣ್ಣೊಳಗ ಬಿದ್ದು। ಒಡಿಯಲಿ ಈ ಊರ।
ಹೆಣ್ಣ ಖೋಡೆಂದು ತಿಳಿಗಲಿ। ಕೋ ॥ ೧೨ ॥

ತುಪ್ಪದ ಕೊಡಗಳೂ। ಒಪ್ಪದಲಿ ಬರೂತಾವ।
ತಿಪ್ಪ್ಯಾಗ ಬಿದ್ದು ಒಡಿಯಲಿ। ಕೋ ॥ ೧೩ ॥

ತಿಪ್ಪಿಯಾಗs ಬಿದ್ದು | ಒಡಿಯsಲಿ ಈ ಊರ |
ಮಿತ್ರಿ ಖೋ:ಡೇ:ದು ತಿರುಗಲಿ | ಕೋ: || ೧೪ ||

ಛೆಜ್ಜಿsಯ ಹೊಲದಾಗs | ಛೆಲ್ಲ್ಯಾಡೊ ನಿsಬ್ಬಣ |
ಛಿಲ್ಲ್ಯಾ ಇಡಬಾರ ನನ ಮಗಳ | ಕೋ: || ೧೫ ||

ಆ ಫಿಲ್ಲ್ಯಾ ನಾs ಒಲ್ಲ | ಈ ಫಿಲ್ಲ್ಯಾ ನಾs ಒಲ್ಲ |
ಕೊಟ್ಟರೊಲ್ಲಿsನ ಜಯನರಿಗಿ | ಕೋ: || ೧೬ ||

ಹತ್ತಿsಯ ಹೊಲsದಾಗ | ಒತ್ತ್ಯಾಡೊ ನಿsಬ್ಬಣ |
ನತ್ತ ಇಡಬಾರ ನನ ಮಗಳ | ಕೋ: || ೧೭ ||

ಆ ನತ್ತ ನಾs ಒಲ್ಲ | ಈ ನತ್ತ ನಾs ಒಲ್ಲ |
ಕೊಟ್ಟರೊಲ್ಲಿsನ ಜಯನರಿಗಿ | ಕೋ: || ೧೮ ||

*　　*　　*　　*

ಊದಸ್ತ ಬಾsರಸ್ತ | ಸೋ:ಬಾನ ಹಾಡುsತ |
ಬಂದನ ಮದಮಗ ಅಗಸಿsಗಿ | ಕೋ: || ೧೯ ||

ಆಗಸಿsಯ ತೆ:ಲಿs ನನ್ನ | ಬಗಸುಳ್ಳ ತಳsವಾರಾ |
ಬೊಗಸಿ ತು:ಬಡಕಿ ಬಿಳಿ ಎಲಿಯ | ಕೋ: || ೨೦ ||

ಊದಸ್ತ ಬಾsರಸ್ತ | ಸೋ:ಬಾನ ಹಾsಡುತ |
ಬಂದನ ಮದುಮsಗ ಬಾಗಿಲಿಗಿ | ಕೋ: || ೨೧ ||

ಬಾಗಿಲದಾಗಿsನ ಕುದುರಿ | ಕಾಲಮ್ಯಾಲಾsಗಲಿ |
ಮದುಮಗ ಕಾಳಿಂಗ ಮಡಿಯsಲಿ | ಕೋ: || ೨೨ ||

*　　*　　*　　*

ನವೌ್ಮಾವ್ವಾ ಕಟ್ಟ್ಯಾಳ | ಎಳ್ಳ ಹಚ್ಚಿsದ ರೊಟ್ಟಿ |
ಕೂಡುಂಬುನು ಬಾರ ನನ ಮಗಳ | ಕೋ: || ೨೩ ||

ನೀ:ವು ಜೈಯsನರು | ನಾವು ನಿಂಗೋ:sತsರು |
ನಿಮ್ಮಲ್ಲಿ ನಾವು ಉಣಬರದ | ಕೋ: || ೨೪ ||

ಪಟ್ಟೋಳಿ ಸೀರೆಯ್ಹರಿದು । ಬುತ್ತಿಯ ಕಟ್ಟಿದ ।
ನೀರ ಕಾಡಲ್ಲಿ ಇಳಿದುಣ್ಣ । ಕೋ ॥ ೨೫ ॥

ಇವ್ರೂ ಬುತ್ತಿಗಳು । ನೀವು ಮುಟ್ಟಿರತೀರಿ ।
ನಾ ಉಣುದಿಲ್ಲ ಹಡದವ್ವ । ಕೋ ॥ ೨೬ ॥

ಹಿಟ್ಟ ಅಕ್ಕಿಯ ತಗೋ । ಬ್ಯಾಳಿ ಬೆಲ್ಲವ ತಗೊ ।
ಮಾಡಿಕೊಂಡುಣ್ಣ ನಿನ್ನಡಿಗಿ । ಕೋ ॥ ೨೭ ॥

ಹಿಟ್ಟಕ್ಕಿ ತಗೋಡಾಳ ಬ್ಯಾಳಿ ಬೆಲ್ಲ ತಗೊಡಾಳ ।
ಹ್ವಾದಾಳ ಸಂಗಯ್ಯನ ಗುಡಿಯಾಗ । ಕೋ ॥ ೨೮ ॥

ಎಡಕಾದರ ಸುಳವಿಲ್ಲ । ಬಲಕಾದರ ಸುಳವಿಲ್ಲ ।
ಎಲ್ಲ್ಯಾದರಕಿಯ ಸುಳವಿಲ್ಲ । ಕೋ ॥ ೨೯ ॥

## ಬರದ ಹಾಡು

ಮೊನ್ನಿನ ಬರದಾಗ ಕುಸುಬಿಯ ಮಾರಿದರಲ್ಲ ।
ಕೋಲು ಕೋಲೆಣ್ಣ ಕೋಲ ॥ ೧ ॥

ಅಣ್ಣಾಗಾದರು ಮಕ್ಕಳಿಲ್ಲ ತಮ್ಮಗಾದರೂ ಮಕ್ಕಳವ । ಕೋ ॥ ೨ ॥

* * * *

ಏ ಅಣ್ಣಾ ಏ ಅಣ್ಣಾ ಸೊಲಗಿ ಜ್ವಾಳಾ ಕಡಾಕೊಡು । ಕೋ ॥ ೩ ॥

ಸೊಲ್ಲಿಗಿ ಜ್ವಾಳಾ ಕಡನೆ ಕೊಟ್ಟರ ನಟ್ಟ ಕಡಿಯಲಿ ಹ್ವಾದೇನಂದಾ ।
ಕೋ ॥ ೪ ॥

ಬಿರಿ ಬಿರಿ ಹ್ವಾದನಲ್ಲ ಗಾದ ಮೆತ್ತಿಗಿ ತಗೆದನಲ್ಲ । ಕೋ ॥ ೫ ॥

ಗಾದ ಮೆತ್ತಿಗಿ ತಗೆದನಲ್ಲ ಸೊಲ್ಲಿಗಿ ಜ್ವಾಳಾ ಕೊಟ್ಟನಲ್ಲ ।
ಕೋ ॥ ೬ ॥

ಸೊಲ್ಲಿಗಿ ಜ್ವಾಳಾ ಒಯ್ಸಕೇರಿ ಹೆಣತಿ ಕೈಯಲಿ ಕೊಟ್ಟ್ಯಾನಲ್ಲಾ ।
ಕೋ ॥ ೭ ॥

ಒಲೀಮ್ಯಾಲ ಎಸರನಿಟ್ಟು ಒಡಿಲಾಕಾದರು ಕುತ್ತ್ಯಳಲ್ಲ ।
ಕೋ ॥ ೮ ॥

ನೆರಮನಿ ನೆಗಿಯಾಣಿ ಬೆಂಕಿಗಾದರು ಬಂದಾಳಲ್ಲ । ಕೋ ॥ ೯ ॥

ಬೆಂಕಿಗಾದರು ಬಂದಳಲ್ಲ ಜ್ವಾಳದ ಗುರುತಾ ಹಿಡಿದಳಲ್ಲ ।
ಕೋ ॥ ೧೦ ॥

ಒಲಿಮ್ಯಾಲಿನ ಎಸರದಾಗ ಹಿಡಿಗಲ್ಲ ಹಗೆದಳಲ್ಲ । ಕೋ ॥ ೧೧ ॥

ಬೀಸಿದ ಹಿಟ್ಟಿನಾಗ ಬೂದಿ ಮಿಶ್ಲಾ ಕಲಸ್ಯಾಳಲ್ಲ । ಕೋ ॥ ೧೨ ॥

ಮರದಾಗಿನ ಜ್ವಾಳಗೋಳು ಉಡಿಯಲ್ಲಾದರು ತಕ್ಕೊಂಡಳ ।
ಕೋ ॥ ೧೩ ॥

* * * *

ಎಂಟು ಮಕ್ಕಳ ಕರಕೊಂಡು ತವರಮನಿಗಿ ಹೋಗೀದಾಳ ।
ಕೋ ॥ ೧೪ ॥

ಏ ಅತಿಗಿ ಏ ಅತಿಗಿ ಸೇರ ಜ್ವಾಳಾ ಕಡಾಕೊಡ । ಕೋ ॥ ೧೫ ॥

ಸೇರ ಜ್ವಾಳಾ ನಮ್ಮಲ್ಲಿಲ್ಲಾ ಹೇರ ಜ್ವಾಳಾ ನಮ್ಮಲ್ಲಿಲ್ಲಾ ।
ಕೋ ॥ ೧೬ ॥

ಅಟ್ಟು ಮಕ್ಕಳ ಕೈಯಾಗ ತುತ್ತ ರೊಟ್ಟಿ ಕೊಡು ಅವ್ವಾ ।
ಕೋ ॥ ೧೭ ॥

ತುತ್ತ ರೊಟ್ಟಿ ಬೇಡಲಿಕ್ಕ ಬಿಕ್ಕಿಗಾರಿ ಬಂದಿದಿಯಾನ । ಕೋ ॥ ೧೮ ॥

ಅಸೂ ಮಕ್ಕಳ ಕರೆದುಕೊಂಡು ಆಳೂತ ಕರೂತ ಮನಿಗಿ ಬಂದ್ಯ ।
ಕೋ ॥ ೧೯ ॥

ತಾಳಿನಾರಿ ತಗೊಂಡಾಳ ಅಂಗಡೀಗಾರಿ ಹೋಗಿದಾಳ । ಕೋ ॥ ೨೦ ॥

ಅದ್ದನಕ್ಕಿ ಕೊಡಿರೆಪ್ಪಾ ದುಡ್ಡಿನಿಸಾ ಕೊಡಿರೆಪ್ಪಾ । ಕೋ ॥ ೨೧ ॥

ಅದ್ದನಕ್ಕಿ ಯಾರಿಗವ್ವಾ ದುಡ್ಡಿನಿಸಾ ಯಾರಿಗವ್ವಾ । ಕೋ ॥ ೨೨ ॥

ಅದ್ದನಕ್ಕಿ ಮಕ್ಕಳಿಗೆಪ್ಪಾ ದುಡ್ಡಿನಿಸಾ ಹೆಗ್ಗಣಿಗೆಪ್ಪಾ । ಕೋ ॥ ೨೩ ॥

ಅದ್ದನಕ್ಕಿ ತಕ್ಕೊಂಡಾಳ ಮನಿಗಾರಿ ಬಂದೀದಾಳ । ಕೋ ॥ ೨೪ ॥

ಕುದುಕುದು ಬಾನಿಸಾಗ ಮಡ್ಡಿಽಸಿಸಾ ಸುರುವೀದಾಳ। ಕೋ ॥ ೨೫
ನೀಲವ್ವ ನಿಂಬೆವ್ವ ಒಂದೇ ಎಡಿ ಮಾಡಿದಾಳ। ಕೋ ॥ ೨೬
ಗಂಗವ್ವ ಗೌರವ್ವ ಒಂದೇ ಎಡಿ ಮಾಡಿದಾಳ। ಕೋ ॥ ೨೭
ಬೀಮಣ್ಣಗ ಕಾಽಮಣ್ಣಗ ಒಂದೇ ಎಡಿ ಮಾಡಿದಾಳ। ಕೋ ॥ ೨೮
ರಾಮಣ್ಣಾ ಲಕ್ಷ್ಮೀಮಣ್ಣಗ ಒಂದೇ ಎಡಿ ಮಾಡಿದಾಳ। ಕೋ ॥ ೨೯।
ಗಂಡ ಹೆಂಡರ ನಡುವ ಒಂದೇ ಎಡಿ ಮಾಡಿದಾಳ। ಕೋ ॥ ೩೦।
ನೀಲವ್ವ ನಿಂಬೆವ್ವ ತನ್ನ ಬಲಕ ಹಾಕಿದಾಳ। ಕೋ ॥ ೩೧ ॥
ಗಂಗವ್ವ ಗವರವ್ವ ತನ್ನ ಎಡಕ ಹಾಕಿದಾಳ। ಕೋ ॥ ೩೨ ॥
ರಾಮಣ್ಣಗ ಲಕ್ಷ್ಮಣ್ಣಗ ಗಂಡನ ಬಲಕ ಹಾಕಿದಾಳ। ಕೋ ॥ ೩೩ ॥
ಬೀಮಣ್ಣಗ ಕಾಮಣ್ಣಗ ಗಂಡನ ಎಡಕ ಹಾಕಿದಾಳ। ಕೋ ॥ ೩೪ ॥
ಗಂಡ ಹೆಂಡರಿಗಿ ನಟ್ಟ ನಡು ಹಾಸಿದಾಳ। ಕೋ ॥ ೩೫ ॥

*  *  *  *

ಬಾಗಿಲಿಕ್ಕಲಕ್ಹೋಗಿ ಏಸಂತಾಳ ನೀಲವ್ವಾ। ಕೋ ॥ ೩೬ ॥
ಮಾಯದ ನನ್ನ ಅಣ್ಣಾ ಮಲ್ಲಡಕಾರೆ ಹೋಗೀದಾನ। ಕೋ ॥ ೩೭ ॥
ದಿಕ್ಕಿಗಿಲ್ಲದ ಬರ ನಮ್ಮ ಮಕ್ಕಳ ಸುತ್ತ ಬಂದಿತ್ತೇನ। ಕೋ ॥ ೩೮ ॥
ರಾಜಾಕಿಲ್ಲದ ಬರ ನಮ್ಮ ರಾಯರ ಸುತ್ತ ಬಂದಿತ್ತೇನ। ಕೋ ॥ ೩೯ ॥

*  *  *  *

ಏ ಅವ್ವಾ ಏ ಅವ್ವಾ ನೀಲಾನ ಸುದ್ದಿ ಕೇಳೀರೇನ। ಕೋ ॥ ೪೦ ॥
ಮೊನ್ನೆಯಾರೆ ಬಂದಿದಳಪ್ಪಾ ಸೇರ ಜ್ವಾಳಾ ಬೇಡಿದಳಪ್ಪಾ।
ಕೋ ॥ ೪೧ ॥
ಸೇರ ಜ್ವಾಳಾ ಬೇಡಿದರ ಹೇರ ಜ್ವಾಳಾ ಕೊಡುದಿತ್ತ। ಕೋ ॥ ೪೨ ॥
ಮಕ್ಕಳವಳಗಿತ್ತಿ ಬಡಿವ್ಯಾದರ ಇದ್ದಾಳವ್ವ। ಕೋ ॥ ೪೩ ॥
ಹೇರು ಜ್ವಾಳಾ ತೆಗೆದುಕೊಂಡು ತಂಗೀ ಊರಿಗೆ ಹೋಗಿದಾನ।
ಕೋ ॥ ೪೪ ॥
ನೀರಿಗಿ ಬಂದ ಅವ್ವಗಳಿರ್ಯಾ ನೀಲನ ಸುದ್ದಿ ಕೇಳಿದಿರೇನ। ಕೋ ॥ ೪೫ ॥
ಆಕಿ ಸುದ್ದಿ ಕೇಳಿಲ್ಲಪ್ಪಾ ಅಕಿ ಮನಿಗಿ ಹೋಗಿಲ್ಲಪ್ಪಾ। ಕೋ ॥ ೪೬ ॥

ಹೇರ ಜ್ವಾಳಾ ತೆಗೆದುಕೊಂಡು ತಂಗಿ ಮನಿಗಿ ಬಂದಿದಾನ । ಕೋ ॥ ೪೭ ॥
ಹೊತ್ತು ಹೊಂಟು ಇಟ್ಹೊತ್ತಾಯ್ತು ತಂಗಿ ಸುಳಿವ ಕಾಣಲಿಲ್ಲ ।
ಕೋ ॥ ೪೮ ॥
ಬೆಳಽಗನಾಗಿ ಇಟ್ಹೊತ್ತಾಯ್ತು ಬೀಗನ ಸುಳುವ ಕಾಣಲಿಲ್ಲ ।
ಕೋ ॥ ೪೯ ॥
ಬಿಸಽಲ ಬಿದ್ದು ಇಟ್ಹೊತ್ತಾಯ್ತು ಮಕ್ಕಳ ಸುದ್ದಿ ಕಾಣಲಿಲ್ಲ ।
ಕೋ ॥ ೫೦ ॥
ಬಾಗಿಲ ತೆರಿದು ನೋಡೂತನಾ ಹತ್ತು ಹೆಣಾ ಬಿದ್ದೀದಾವ ।
ಕೋ ॥ ೫೧ ॥
ಹತ್ತರ ಗೂಡ ಹನ್ನೊಂದಂತ ಪೇಟಗಟಾರ ಮಾಡಿಕೊಂಡ ।
ಕೋ ॥ ೫೨ ॥
ನೀಲವ್ವನ ನಿಂಬೆವ್ವನ ನಿಂಬಿ ಬನದಾಗಿಟ್ಟೆದಾರ । ಕೋ ॥ ೫೩ ॥
ಗಂಗವ್ವನ ಗೌರವ್ವನ ಬಾಳೀ ಬನದಾಗಿಟ್ಟೆದಾರ । ಕೋ ॥ ೫೪ ॥
ರಾಮಣಗ ಲಕ್ಷ್ಮೀಮಣಗ ತೆಂಗಿನ ಬನದಾಗಿಟ್ಟೆದಾರ । ಕೋ ॥ ೫೫ ॥
ಭೀಮಣಗ ಕಾಮಣಗ ಪೇರೂ ಬನದಾಗಿಟ್ಟೆದಾರ । ಕೋ ॥ ೫೬ ॥
ಗಂಡಹೆಂಡಽರನೊಯ್ದು ಶಿವನ ಪಾದದಲಿಟ್ಟೆದಾರ । ಕೋ ॥ ೫೭ ॥
ಮಾಯಽದ ಅಣ್ಣನ ಒಯ್ದು ತಂಗೀ ಪಾಪದಲಿಟ್ಟೀದಾರ ।
ಕೋ ॥ ೫೮ ॥

---

# ದ್ರೌಪದಿಯ ಹಾಡು

ಕರಿಯಪೂರ ನಗರದಲ್ಲಿ ।
ಕಽವರವರು ಪಾಂಡವ್ರವರು ।
ಧರಿಯ ಮ್ಯಾಲ ಲೆತ್ತನಿಟ್ಟು ಜೂಜನಾಡ್ಯಾರ ॥ ೧ ॥

ಪರಮಪಾಪಿ ಶಕುನಿ ತಾನು ।
ಫಾಶಾದೊಳಗ ಫಕೀರನಾಗಿ ।
ಧರ್ಮರಾಜ ಧರುಣಿ ದ್ರೌಪತಿನ ಸೋತರ ॥ ೨ ॥

ಸೋತನಂತ ದುರ್ಯೋಧನ ।
ಸಂತೋಷದಿಂದ ಕೇಳಿದಾನ ।
ದೂತನ್ನಟ್ಟಿದಾರು ಮೂರು ಬದುಕ ತರಸ್ಯಾರ ॥ ೩ ॥

ನಿಂಬೆಣ್ಣಂತ ಕೊಂಬೆಣ್ಣಂತ ।
ಅನಿಪಂತ ನಿನ್ನ ನದಗಿ ।
ಜಾತಮುತ್ತಿನಂಥ ರಂಬಿ ಬಾರ ದ್ರೌಪತಿ ॥ ೪ ॥

ಹೆಚ್ಚು ಕುಂದ್ಯಾನಾಡದಿರು ।
ಹೆರವರ್ಹೆಣ್ಣಾ ನೋಡದಿರು ।
ಹಲ್ಲಿತ್ತ್ಯಾರ್ತೈವರವರು ಬ್ಯಾಡೊ ದುಸುವಾಸಾ ॥ ೫ ॥

ಹೆಣ್ಣು ಬಾಲಿ ಐವಳಿಗೆ ।
ಹೆಮ್ಮಿಯಾದ ಮಾತನ್ಯಾಕ ।
ಕಣ್ಣು ಚಿವುಟಿ ದುರ್ಯೋಧನ ಸದರಿಗೊಪ್ಪ್ಯಾನ ॥ ೬ ॥

ಹೀನ ದುಸುವಾಸ ನಿನ್ನ ।
ರಗತಿನೊಳಗ ನಿಲಿಯ ಹಿಂಡಿ ।
ಕರಳ ತೆಗೆದು ಮಾಲಿಮಾಡಿ ಧರಿಸೇನಂದಳ ॥ ೭ ॥

ಮುದ್ದಿ ಮುಖದ ಮಾನವರಿಗಿ ।
ಮುಂದೆಮಾಡಿ ತಂದೆನಂದ ।
ಇಂದ ನಿಮಗ ಬಿನ್ನವೆಂದು ಕೈಯ ಮುಗಿದರ ॥ ೮ ॥

ವೀರಬೊಬ್ಬಿ ಇಕ್ಕತಾರ ।
ಲಡ್ಡನಾದರು ಕಡವುತಾರ ।
ಆಗ ದ್ರೌಪತಿಯ ಸೀರಿ ಸೆಳೆಯುತಿದ್ದರ ॥ ೯ ॥

ಆಗ ಮಾಡಿದ ಪಾಪ |
ಈಗ ಬಂದು ಒದಗಿತೇನ |
ಕೃಷ್ಣದೇವನ ಪಾದಕ್ಹೋಗಿ ಎರಗಲೇನ ॥ ೧೦ ॥

ಹರಿಯ ಹರಿಯ ಅನ್ನುತಾಳ |
ಹರಿಗೆ ಮೊರೆಯನಿಡುವುತಾಳ |
ಧರಿಯ ಮ್ಯಾಲ ಬಿದ್ದು ದ್ರೌಪತ್ಹ್ಯೊರಳತಿದ್ದಳ ॥ ೧೧ ॥

ಆಕಾಶ ಬಣ್ಣ ಸೀರಿ |
ಲೋಕದಾಗ ಇಲ್ಲ ಸೀರಿ |
ಸಾಕ್ಷ ಕೊಟ್ಟಂತ ಸೀರಿ ಸಂವಿಯಲ್ಹ್ಯೋದವ ॥ ೧೨ ॥

ಹಾದಿ ಇಂಜಾನ ಕಾಯೊ |
ಗಿಡದ ಮಂಜಾನ ಕಾಯೊ |
ಹಿಂಡ ದೈತ್ಯರಾಳುವಂಥ ದೇವ ನೀ ಕಾಯೊ ॥ ೧೩ ॥

## ‘ದಂಡ ಬಂತವ್ವಾ ದಂಡ’



ದಂಡ ಬಂತವ್ವ ದಂಡ ಸೊಲ್ಲಾಪುರದ ದಂಡ |
ದಂಡ ನೋಡಿ ಬರತ ಹಡದವ್ವಾ | ಕೋಲೆನ್ನ ಕೋಲ ॥

ಹುಟ್ಟಿದ ಮಗಳವ್ವ ಕಟ್ಟಿಕಲ್ಲ ಇಳದಿಲ್ಲ |
ಭ್ಯಾಡ ನನ ಮಗಳ ಹೊರಿಯಾಕ | ಕೋ ॥

ಭ್ಯಾಡ ಭ್ಯಾಡಂದರ ಘಿರಿಘರಿ ಹೊಂಗ್ಯಾಳ |
ಹೋಗಿ ಅಗಸ್ಯಾಗ ನಿಂತಾಳ | ಕೋ ॥
ಘೇರ್ಯಾದ ಮ್ಯಾಲಕಿಯ ಬೆಳಕ | ಕೋ ॥

ಮುಗಲಿಲ್ಲ ಮಾಡಿಲ್ಲ ಮಿಂಚ ಗದ್ದರಣಿಲ್ಲ।
ಇದು ಯಾತದ ಬೆಳಕ ಕರಣೀಕ। ಕೋ॥

ಒಬ್ಬರ ಹೋಗಂದ್ರ ಇಬ್ಬರ ಹೋಗಿದಾರ।
ಓಡ್ಹೋಗಿ ಅಕಿನ ಹಿಡದಾರ। ಕೋ॥

ಇಪ್ಪತ್ತು ವರುಷದ ತುಪ್ಪಂಡ ಕೂದಲ।
ನಾರಿ ನಿನಗಾಗಿ ಕಾಯ್ದಿದಾಳೀನ। ಕೋ॥

ಹನ್ನೆರಡು ವರುಷದ ಎಣ್ಣಂಡ ಕೂದಲ।
ಮಿತ್ರಿ ನಿನಗಾಗಿ ಕಾಯ್ದಿದಾಳೀನ। ಕೋ॥

ನಾರಿ ನಿನಗಾಗಿ ಕಾಯ್ದಿದಾಳೀನ ಸೊಲ್ಲಪುರದ।
ದಂಡೀಗಿ ಥಾರಿ ಎರೆದೀದನೇನ। ಕೋ॥

ಅಂಗಳದಾಗಿನ ತನುವ ಶಾವಂತಿಗ್ಹೂವ।
ಹೂ ಬಾಡಿದಾಗೊಮ್ಮೆ ನೆನೆಯವ್ವ। ಕೋ॥

ಕುಂಬಿಯ ಮ್ಯಾಲಿನ ಮಂಡ ಶಾವಂತಿಗ್ಹೂವ।
ಹೂ ಬಾಡಿದಾಗೊಮ್ಮೆ ನೆನೆಯವ್ವ। ಕೋ॥

--

# ನೀಲಗಂಗಾನ ಹಾಡು.



ತಾಯಿ ತಂದಿ ಸತ್ತು ಇಂದಿಗ್ಹನ್ನೆರಡೊ ವರುಷ॥
ಇಂಷ್ಟ ನಮ ನಿ(ೕ)ಲ-ಗಂಗನ ಭಾವ ಬಂದಾನ। ಸೂಯಿ॥
ಇಂದ ನಿಮ ನಿ(ಂ)ಲ-ಗಂಗನ ಖಳುವಬೇಕವ್ವಾ। ಸೂಯಿ॥

* * * *

ಅಚ್ಚೀ ಬಿಂಡಿ ಬಿಡು ಇಚ್ಚಿ ಬಿಂಡಿ ಬಿಡು॥
ಬಡುವಿನ ಬಿಂದ್ಯಾನ ಸೀರಿ ಉಟಗ್ವಾ ನಿಲಗಂಗಾ। ಸೂಯಿ॥

ಅಚ್ಚೀ ಭರಣೀ ಬಿಡು ಇಚ್ಚೀ ಭರಣೀ ಬಿಡು ||
ನಡುವಿನ ಭರಣ್ಯಾನ ವಸ್ತ್ರಾ ಇಟಗ್ಯಾ ನೀಲಗಂಗಾ | ಸೂಯಿ ||
ಎಡಕೊಮ್ಮ ಹೊಳ್ಳವ್ವಾ ಬಲಕೊಮ್ಮ ಹೊಳ್ಳವ್ವಾ ||
ನಿಂತ ಗೆಳದ್ಯಾರಿಗಿ ಹೇಳವ್ವಾ ತಂಗಿs | ಸೂಯಿ ||
ಬಿಸಲs ಒಡೆದರ ಶೆಲ್ಲ್ಯಾ ಮುಸುಕ ಹಾಕಣ್ಣಾ | ಸೂಯಿ ||
ನೀರಡಿಕ್ಯಾದರ ಗಿಂಡಿಲಿ ನೀರ ಕುಡಿನಣ್ಣಾ | ಸೂಯಿ ||

* * * *

ತೆವರಿಂಗ್ಹೊಡಿಯುವ ಕುದುರಿ ತೆಗ್ಗಿಂಗಿ ಹೊಡದಾನ ||
ಮೈಯ ಕೈಯಗಳು ಮುಟ್ಟಲ್ಹೋಂಗ್ಯಾನs | ಸೂಯಿ ||
ಸಿಟ್ಟೀಲಿ ನೀಲಗಂಗಾ ಮಡವ ಧುಮುಕ್ಯಾಳ | ಸೂಯಿ ||

* * * *

ಆ ಊರ ಹಾದೀಲಿ (ಬತ್ತಲ) ಕುದರಿs ಬರತದ ||
ಅಣ್ಣಾ ಸಹದೇವಣ್ಣಾ ಒಬನೇ ಬರತಾನ | ಸೂಯಿ ||
ಮಡದೀ ನೀಲಗಂಗಾನ ಖಳುವ ಲಿಲ್ಲೀನ | ಸೂಯಿ ||
ಆ ಊರ ಹಾದೀಲಿ ಏಳ್ಮಂದಿ ಕಳ್ಳsರು ||
ಮೈಯs ಕೈಯಗಳು ಮುಟ್ಟಲ್ಹೋಗ್ಯಾರೋ | ಸೂಯಿ ||
ಸಿಟ್ಟೀಲಿ ನೀಲಗಂಗಾ ಮಡವ ಧುಮುಕ್ಯಾಳೋ | ಸೂಯಿ ||
ಮೊನ್ನಿsನ ರಾತುರಲಿ ನವನsವು ಬಿಸದ್ದಿತೊ ||
ಮುತ್ತಿನ ತೂರಾಯಿಗಿ ಬೆಂಕಿ ಹತ್ತಿತ್ತೊ | ಸೂಯಿ ||
ಇsವು ಸುದ್ದಿಗಳವರಕ್ಕsಗ ಒಯ್ಯೋ | ಸೂಯಿ ||

* * * *

ತಂಗಿs ನೀಲಗಂಗಾ ಏನ ಹೇಳ್ಯಾಳೊ | ಸೂಯಿ ||
ಆ ಊರ ಹಾದೀಲಿ ಏಳ್ಮಂದಿ ಕಳ್ಳsರ ||
ಮೈಯ ಕೈಯಗಳು ಮುಟ್ಟಲ್ಹೋಗ್ಯಾರೊ || ಸೂಯಿ ||
ಸಿಟ್ಟೀಲಿ ನೀಲಗಂಗಾ ಮಡವ ಧುಮುಕ್ಯಾಳೊ | ಸೂಯಿ ||

ತಾಯ್ತಂದಿ ಸಾಯಾಗ ಐಯ್ದುಸದ ಕೂಸಿದ್ದಾವೆ !
ಖಾರಿಕ ತೆಯ್ಯಾಬ್ಬಿ ಸಲಹಿದನಲ ತಂಗಿs । ಸೂಯಿ ॥
ತಾಯ್ತಂದಿ ಸಾಯಾಗ ಪಿಯ್ಬಿಸದ ಕೂಸಿದ್ದಿ ॥
ಲಂಬರಪ್ಪಾಗ್ಬಿ ಸಲವಿದನಲ ತಂಗಿs । ಸೂಯಿ ॥

# ಭಾಟಗೀ ಹಾಡು



ಹೆಣ್ಣ ಬೇಃಡಲಿ ಹ್ವಾದ್ರಽ ಹೆಣ್ಣೇಃಸು ಮಾಡತಿರಲಿ |
ಹೆಣ್ಣ್ಹಾಲಾ ಬಾಸಾಽ ಉಣತಿರಲೆ |
ಹೆಣ್ಣ್ಹಾಲಾ ಬಾನಾ ಉಣತಿರಲಿ | ಹೆಣ್ಣನ ತಾಯಿ |
ಉಮ್ಮ್ರಾಯದ ನಗಿಯ ನಗತಿರಲೆ ||೧||

ಕೂಸ ಬೇಃಡಲಿ ಹ್ವಾದ್ರಽ ಕೂಸೇಃಸು ಮಾಡತಿರಲೆ |
ಕೂಸ್ಹಾಲು ಬಾನಾಽ ಉಣತಿರಲೆ |
ಕೂಸ್ಹಾಲು ಬಾನಾ ಉಣತಿರಲೆ | ಕೂಸಿನ ತಾಯಿ |
ಕುಸಮಾಯದ ನಗಿಯ ನಗತಿರಲೆ ||೨||

*　　*　　*　　*

ಗ್ವಾಡಿಯ ನೀಃ ತೆಳಗಽ ಜೋಃಡ ಮಾವಿನ ಮರನ |
ತಟ್ಟಂದರ ತೆಳಗಽ ತುದಿಯೆಲಿಯ |
ತಟ್ಟಂದರ ತೆಳಗಽ ತುದಿಯೆಲಿ | ಪಕ್ಕಸಿ ಕುಂತು |
ದೊಡ್ಡವರಿಗೊಚನಾ ಕೊಡತಾವ ||೩||

*　　*　　*　　*

ಪಟ್ಟ ಪಡಸಲಿಗ್ಯಾಗಽ ದೊಡ್ಡಪ್ಪ ತಾ ಕುಂತು |
ಮಡದೀಃನ ಕರೆದು ಬೆಸಗೊಂಡಾ |
ಮಡದೀಃನ ಕರೆದು ಬೆಸಗೊಂಡು | ಕೇಃಳ್ಯಾರ |
ಕೊಡವ್ರೂಸೆನವಂಗೆ ಮಗಳನ್ನ ||೪||

ವರಸುದ್ದನಿದ್ದರ ಕುಲ ಚೊಕ್ಕನಿದ್ದರ |
ಫಣಿ ನಾಲಿಗಿ ಸುದ್ದಽ ಮುಕ ಸುದ್ದ |
ಫಣಿ ನಾಲಿಗಿ ಸುದ್ದಽ ಮುಕ ಸುದ್ದ | ನಿದ್ದರ |
ಕುಡಹೋಃಗರಿ ನಮ್ಮ ಮಗಳನ್ನ ||೫||

*        *        *

ಆ ಮನಿ ಅತ್ತಿsಗಿ ಈ ಮನಿ ನಾದುsನಿ।
ಆಕಳ ಕರ ಸಾಕ್ಷಿ ನೆಗಿಯಾಣಿ।
ಆಕಳ ಕರ ಸಾಕ್ಷಿ ನೆಗಿಯಾಣಿನ। ಕರಕೊಂಡು।
ಬಾಲನ ಭಾಟಿಗ್ಗೆ ಬರಬೇಕ ॥ ೬ ॥

ಶುಕ್ರವಾರ ದಿನ ಸೂರ್ಯ ಉದಯಾದಂಗ।
ಇಂದ ನಮ್ಮಳಿಯ ಉದಿಯಾದ।
ಇಂದ ನಮ್ಮಳಿಯ ಉದಿಯಾದ। ಹಡೆದವ್ವ।
ಶಾಂವಿಗಿ ಸಯಿದಾನಕ ಹದಮಾಡ ॥ ೭ ॥

ಮಂಗಳವಾರ ದಿನ ಚಂದರುದಯಾದಂಗ।
ಇಂದ ನಮ್ಮಳಿಯ ಉದಯಾದ।
ಇಂದ ನಮ್ಮಳಿಯ ಉದಯಾದ। ಹಡೆದವ್ವ।
ಹಪ್ಪಳ ಸೆಂಡಿsಗಿ ಹದಮಾಡ ॥ ೮ ॥

ಕಡಲಿಕಾಳಂಗ ಕಟಿದ ಮುತ್ತಿಟ್ಟ್ಯಾನ।
ಹಡದವ್ವ ನೋಡ ಅಳಿಯರಿಗೆ।
ಹಡದವ್ವ ನೋಡ ಅಳಿಯsರ। ಚೆಲುವಿsಕಿ।
ದೊಡ್ಡವರ ತಕ್ಕ ಅಳಿಯsನ ॥ ೯ ॥

ಉದ್ದಿsನ ಬ್ಯಾಳ್ಯಂಗ ತಿದ್ದಿ ಮುತ್ತಿಟ್ಟ್ಯಾನ।
ದೊಡ್ಡವ್ವ ನೋಡ ಅಳಿಯರನ।
ದೊಡ್ಡವ್ವ ನೋಡ ಅಳಿಯsರ। ಚೆಲುವಿsಕಿ।
ದೊಡ್ಡವರ ತಕ್ಕ ಅಳಿಯsನ ॥ ೧೦ ॥

———

# ಒಳಕಲ್ಲ ಪೂಜೇ ಹಾಡು



ಕಲ್ಲ ಪೂಜಿ ಮಾಡಲಕ ನನ್ನಾö್ಯರು ಕರಸ್ಯಾರ ।
ನಾಲಮ್ಯಾಳಿಗಿ ಮನಿಯವಳ ॥ ಸುವ್ವಿ ಸುವ್ವಿ ಸುವ್ವಾಲಿ॥ ೧ ॥

ಸಾಲಮ್ಯಾಳಿಗಿ ಮನಿಯವಳ ತಂಗೆವ್ವಾ ।
ಕಲ್ಲ ಪೂಜಿsಗಿ ಕರಸ್ಯಾಳ ॥ ಸು.... ॥ ೨ ॥

ಒಳ್ಳ ಪೂಜಿ ಮಾಡಲಿಕ್ಕ ನನ್ನಾö್ಯರು ಕರಸ್ಯಾರ ।
ಸಾಲ ಮ್ಯಾಳಿsಗಿ ಮನಿಯವಳ ॥ ಸು ... ॥ ೩ ॥

ಸಾಲ ಮ್ಯಾಳಿsಗಿ ಮನಿಯವಳು ತಂಗೆವ್ವಾ ।
ಒಳ್ಳ ಪೂಜಿsಗಿ ಕರಸ್ಯಾಳ ॥ ಸು.... ॥ ೪ ॥

ಬಲ್ಲಬಲ್ಲವರಿsಗಿ ಪಲ್ಲಕ್ಕಿ ಕಳವ್ಯಾಳ ।
ಪಿಲ್ಲ್ಯಾದಗಾಲ ಮಗಳಿsಗಿ ॥ ಸು ... ॥ ೫ ॥

ಪಿಲ್ಲ್ಯಾದಗಾಲ ಮಗಳ ಸಂಗಮ್ಮಗ ।
ಪಲ್ಲಕ್ಕಿ ಕೊಟ್ಟು ಕರಸ್ಯಾರ ॥ ಸು.... ॥ ೬ ॥

ನೆಂಟನೆಂಟರಿsಗಿ ಮಂಟಪ್ಪ ಖಳವ್ಯಾರ ।
ಮಂಟಿಗಿಗಾಲ ಮಗಳಿಗೆ ॥ ಸು ... ॥ ೭ ॥

ಮಂಟಿsಗಿಗಾಲ ಮಗಳ ಸಂಗಮ್ಮಗ ।
ಒಂಟಿ ಸಿಂಗರಿಸಿ ಖಳವ್ಯಾರ ॥ ಸು.... ॥ ೮ ॥

ಹಂದರ ಮ್ಯಾಲಿನ ಕಣಕಿ ನಂದಿ ಮೆಯ್ದ್ಯಾವೆಂದು ।
ಬಿಚ್ಚಿ ಬಿಳಿ ಎಲಿ ಹೆರವ್ಯಾರ ॥ ಸು.... ॥ ೯ ॥

ಬಿಚ್ಚಿ ಬಿಳಿ ಎಲಿಯ ಹೆರವ್ಯಾರ ತಮ್ಮsಗ ॥
ಅಪ್ಪ ಮಾಡ್ಯಾನ ಮದುವಿsಯ ॥ ಸು.... ॥ ೧೦ ॥

ಹೆಂದರ ವ್ಯಾಲಿನ ಕಣಿಕಿ ನೇದಿ ಮೆಯ್ದ್ಯಾವೇದ।
ಬಿಚ್ಚಿ ಬಿಳಿಯಲಿ ಹರವ್ಯಾರ ಸು.... ॥ ೧೧ ॥

ಬಿಚ್ಚಿ ಬಿಳಿಯಲಿ ಹರವ್ಯಾರ ತಮ್ಮಾಗ।
ಅಣ್ಣ ಮಾಡ್ಯಾನ ಮದುವೀಯ ॥ ಸು.... ॥ ೧೨ ॥

---

# ಅರಿಷಿಣ ಹಚ್ಚೊ ಹಾಡು

(೧)

ದೇವ ದೇವರೆಣ್ಣಿ ಯಾವ ದೇವರೆಣ್ಣಿ ।
ಮನಿಯ ದೇವರ ಮೊದಲೆಣ್ಣಿ ।
ಹರಹರ ನಮ ಸಿವಗ ನೆಯ್ಯೆಣೆ ॥ ೧ ॥

ಬಾಲಗೆಣ್ಣಿ ಹಚ್ಚೊಟಿಗೆ ಬಾಗಿಲಿಗೆ ಬಿಸಿಲ್ಬಂದ।
ನಾಲ್ವತ್ತಾವ್ವಟದ ಎಲಿ ಬಂದ। ಹರಹರ.... ॥ ೨ ॥

ಕಂದಗೆಣ್ಣಿ ಹಚ್ಚೊಟಿಗೆ ಅಂಗಳಕ ಬಿಸಿಲ್ಬಂದ।
ಐವತ್ತಾವ್ವಟದ ಎಲಿ ಬಂದ। ಹರಹರ.... ॥ ೩ ॥

ನೀರಿಲ್ಲದಂಗಳಾಗ ನೀರ್ಯಾಕನಾಗ್ಯಾವ।
ಊರಿಗಿ ದೊಡ್ಡವರ ಮಗ ಮಿಂದ। ಹರಹರ.... ॥ ೪ ॥

ಕೆಸರಿಲ್ಲದಂಗಳಾಗ ಕೆಸರ್ಯಾಕನಾಗ್ಯಾವ।
ಹೆಸರಿಗಿ ದೊಡ್ಡವರ ಮಗ ಮಿಂದ। ಹರಹರ.... ॥ ೫ ॥

ಹೆಸರಿಗಿ ದೊಡ್ಡವರ ಮಗ ಮಿಂದ ತಮ್ಮಾಗ।
ಹಸರ ಪಲ್ಲಕ್ಕಿ ನೆರಳಾಗಿ। ಹರಹರ.... ॥ ೬ ॥

# ಅರಿಷಿಣ ಹಚ್ಚೋ ಹಾಡು

(೨)

ಹಂಚಗೂಣಿ ಬೆಂಚಗೂಣಿ ಮುತ್ತಿನ ನಾಗುರಣಿ
ಕುಸುಮಲ್ಲಿ ಭೂದೇವಿಗೆ ||
ಮುತ್ತಿನ ಬಟ್ಟಿಟ್ಟು ಮುತ್ತೈದೆರೆಲ್ಲಾ
ಎಣ್ಣಿ ಹಚ್ಚೂನು ಬನ್ನಿಽರೆ ||೧||

ಗಂಜಿಽಯ ಸೀರ್ಯುಟ್ಟು ಗಂಧಽದ ಬಟ್ಟಿಟ್ಟು
ಪಿಲ್ಲೆ ಕಾಲುಂಗರಿಟ್ಟುಽ ||
ಮುಡಿಸಣ್ಣ ಮುತ್ತಿಽನ ಸತ್ತನಿಟ್ಟವರೆಲ್ಲ
ಎಣ್ಣಿ ಹಚ್ಚೂನು ಬನ್ನಿಽರೆ ||೨||

ಚಿಕ್ಕಿಽಯ ಸೀರ್ಯುಟ್ಟು ಚಿಲಕಽದ ಬಟ್ಟಿಟ್ಟು
ಮೂಗಿಽಗಿ ಮೂಗತಿಟ್ಟವರ ||
ಜಾಗಿಪಂಡೀ ಮುಡಿಯ ಮುತ್ತೈದೇರ್ಯಾ
ಎಣ್ಣಿ ಹಚ್ಚೂನು ಬನ್ನಿಽರೆ ||೩||

ಕಂಚೀನ ಬಟ್ಲಾಗ ಮಿಂಚೆಣ್ಣಿ ತಕ್ಕೊಂಡು
ಕೆಂಚಿರೊಂದ್ಯವರಽ ||
ಕೆಂಚರೊಂದ್ಯವರ ನೆರೆದ ಮುತ್ತೈದೇರ್ಯಾ
ಎಣ್ಣಿ ಹಚ್ಚೂನು ಬನ್ನಿಽರೆ ||೪||

ಬೆಳ್ಳಿಽಯ ಬಟ್ಲಾಗ ಎಳ್ಳೆಣ್ಣಿ ತಕ್ಕೊಂಡು
ನಲ್ಲಿರೊಂದ್ಯವರಽ ||
ನಲ್ಲಿರೊಂದ್ಯವರ ನೆರೆದ ಮುತ್ತೈದೇರ್ಯಾ
ಎಣ್ಣಿ ಹಚ್ಚೂನು ಬನ್ನಿಽರೆ ||೫||

ಹೆವಳಸರ ಬವಳಸರ ಮ್ಯಾಲ ಮುತ್ತಿನ ಸರ
ತಾಯಿತ ಲ್ಯಾವಳ ||
ತಾಯಿಽತ ಲ್ಯಾವಳ ತಾಳಿ ಕಟ್ಟಿಽದವರ‍್ಯಾ
ಎಣ್ಣಿ ಹಚ್ಚಿಽನು ಬನ್ನಿಽರೆ || ೬ ||

---

# ಐರಾಣಿಯ ಹಾಡು

ಜಾಣ ಕುಂಬಾರನ ಮನಿ ಯಾವ ಕಡಿಗಽದ |
ಕಪ್ಪುರದ ತಿಪ್ಪಿ ಎಡಽ ಬಲಽ | ಸೋ॰ || ೧ ||

ಕಪ್ಪ-ಉರದಽ ತಿಪ್ಪಿ ಎಡ ಬಲ ಮಾಡಿಕೊಂಡು |
ಜಾಣ ಕುಂಬಾರನಽ ಮನಿಽಗ್ವ್ಯಾದಽ | ಸೋ॰ || ೨ ||

ಮುಂಜಾಳಿ ಕುಂಬಾರಣ್ಣಾ ಮಸರ ಬೋ॰ಸುಂಡಾನ |
ಹಾರ‍್ಯಾರಿ ಕೆನರ ತುಳಽದಾನಽ | ಸೋ॰ || ೩ ||

ಹಾರಿ ಹಾರಿ॰ ಕೆನರ ತುಳದು ತಾ ಮಾಡ್ಯಾನ |
ಸಾರ‍್ಯಾರ ಹುರುವ ಒಂದೈಯಽರಾಣಿ | ಸೋ॰ || ೪ ||

ಕಡಗದ ಕೈಯಕ್ಕಿ ಕೊಡವಿ ಕುಂಬಾರವ್ವ |
ಕೊಡದ ಮ್ಯಾಲ್ಯಾನ ಬರಽದಾಽಳ | ಸೋ॰ || ೫ ||

ಕೊಡದನೆ ಮ್ಯಾಲ್ಯಾನ ಬರದಾಳ ನಮ್ಮೂರ |
ಬಾಳಿ ಬನದಾನೊಂದರಽಗಿಣಿಯ | ಸೋ॰ || ೬ ||

## ಸಂಡಿಗೆ ಕಡಿಯುವ ಹಾಡು



ಶಂಡೀಗಿ ಕಡದಾರಲ್ಲ । ದೊಡ್ಡ ಶರಣ್ಯಾರು ನೆರದಾರಲ್ಲ ।
ಒಡ್ಡಿ ಬಾಜೆಂತ್ರೀಲಿ ಪುರವಂತನಾಡಸ್ತ ಐಸೀರಿಲ್ಹೊಂಟಾರಲ್ಲ ॥ ೧ ॥

ಹಡದೀಯ ಹಾಸ್ಯಾರಲ್ಲ । ವ್ಯಾಲ ಮದುಮಕ್ಕಳ ನಡಿಸ್ಯಾರಲ್ಲ ।
ಖನ್ನಿ ಪಾರ್ವತಿದೇವಿಗಿ ಎಣ್ಣಿ ಪತ್ತ್ಸಲುಡಿಸಿ ಸೋಬಾನ ಪಾಡ್ಯಾರಲ್ಲ ॥ ೨ ॥

ಗಡಗಡ ಗದ್ದವುರುಸ್ತ । ನಮು ಶಿವಗ ಬಿದರೀನ ಮಳಿ ಆದಾವ ।
ಬರುವ ಅಬ್ಬರಣಿ ತೆಳಗ ಸರುವರಿಗಿ ಗಿರಿರಾಜಾ ಸರುವೆಲ್ಲ
ನನಗೆಂದಾನ ॥ ೩ ॥

ಗಡಗಡ ಗದ್ದವುರಸ್ತ । ನಮು ಶಿವಗ ಬಿದರೀನ ಮಳಿ ಆದಾವ ।
ಆಡೀದ ವಾಕ್ಯಕ ಮದವಿ ಸಮರಮದಿಂದ ಬೀಡೀಕಿ
ಮನಿ ಕೊಟ್ವಾರ ॥ ೪ ॥



## ನೂಲು ಸುತ್ತುವ ಹಾಡು



ಸಣ್ಣ ಖಂಡಿಕ್ಕ್ಹಿಡಿದು ಕನ್ನಿ ತಾ ಬರತಾಳss ।
ಚೆನ್ನಮಲ್ಲೈನ ನೆನsವೂತ ॥
ಚೆನ್ನಮಲ್ಲೈನ ನೆನವೂತೀ ಕಳಸಕss ।
ಛೆಂದಾಗಿ ನೂಲಾ ತೊಡssಸವ್ವಾ ॥ ೧ ॥

ಹಸರ ಖಂಡಿಕ್ಕ್ಹಿಡಿದು ಕುಸುಮಲ್ಲಿ ತಾ ಬರತಾಳss ।
ಬಸವೇಸುರನಿಂಗನ ನೆನವೂತ ॥

ಬಸವೇಸುರನಿಂಗನ ನೆನವೂತೀ ಕಳಸಾಕSS ।
ಹಸನಾಗಿ ಸೂಲಾ ತೊಡSSಸವ್ವಾ ॥ ೨ ॥

ಆ ನಾಡದ ಬಡಗ್ಯಾ ಮಾಡSಬಲ್ಲದ ಮಣಿಯSS ।
ಮಾಡುತ ಮಾಣಿSಕ ಜಡSದಾರ ॥
ಮಾಡುತ ಮಾಣಿSಕ ಜಡಸಿ ತಂದ ಮಣಿಯSS ।
ಯಾವಲ್ಲಿ ಇಡವೂನ ಹಡದವ್ವಾ ॥ ೩ ॥

ಆ ನಾಡದ ಬಡಗ್ಯಾ ಮಾಡSಬಲ್ಲದ ಮಣಿಯSS ।
ಕೆತ್ತೂತ ಮುತ್ತಾ ಜಡSದಾರ ॥
ಕೆತ್ತೂತ ಮುತ್ತಾ ಜಡಸಿ ತಂದಾ ಮಣಿಯSS ।
ಯಾವಲ್ಲಿ ಇಡವೂನ ಹಡದವ್ವಾ ॥ ೪ ॥

ಅಲ್ಲಂಬ್ಬರಿವ್ಯಾಗ ಗಿಲ್ಲಂಬು ಮಗಿಸ್ಥಾಕಿ ।
ನಿಲ್ಲದಲೆ ನೀರ ಬೆರSಸ್ಯಾರ ॥
ನಿಲ್ಲದಲೆ ನೀರ ಬೆರಸ್ಯಾರ ತಂಗೆವನSS ।
ಫಿಲ್ಲ್ಯದ ಕಾಲ ಕೆಸರಾಗೆ ॥ ೫ ॥

---

# ಅಡಿಕೆ ಆಡುವ ಹಾಡು

---

ಐದು ಅಕ್ಷರದಿಂದ ತೆಯದು ಗಂಧಾSದಿಂದ ।
ಮಲ್ಲಿಗ್ಹೂವಿನS ಕ್ರಮSದಿಂದ ॥
ಮಲ್ಲಿಗ್ಹೂವಿSನ ಕ್ರಮದಿಂದ ತಂಗೆಮ ತನ್ನ ।
ರಾಯರ ಶ್ರೀಪಾದಾS ತೊಳSದಾಳ ॥ ೧ ॥

ರಾಯರ ಮಗಳ ಬಂSದು ಪಾದಪೂಜೆ ಮಾಡಟಗೆ ।
ಸಾದಲಿ ಕಂಡಾಳS ಪದಮವ ॥

ಪಾದಲಿ ಕಂಡಾಳ ಪದುಮವ ರಾಯರ ನಿಂಗ |
ಆನಿ ಏರ್‍ಧಾರ ಬಲ ಬಂದ ||೨||

ಶೆಟ್ಟಿವರ ಮಗಳ ಬಂದು ಬಟ್ಟು ಪೂಜಿ ಮಾಡಟಿಗೆ |
ಬಟ್ಟಲಿ ಕಂಡಾಳ ಪದುಮವ ||
ಬಟ್ಟಲಿ ಕಂಡಾಳ ಪದುಮವ ರಾಯರ ನಿಮಗ |
ಮಂಚ ಏರ್‍ಧಾರ ಬಲ ಬಂದ ||೩||

* * * *

ಹತ್ತೂರ ರಾಜ್ಯ ನಿಮ್ಮಪ್ಪ ಆಳಿದರೇನ |
ಒಂಕಿಗಿ ನಿಮ ಕಾಲ ತೊಳದೆಲ್ಲ ||
ಒಂಕಿಗಿ ನಿಮ ಕಾಲ ನಾವ್ಯಾಕ ತೊಳಿಯುನು ಧೊರಿಯ |
ಪ್ರೇಮ ಬಲ್ಲವರ ಗುಣಕಾಗಿ ||೪||

ಎಂಟೂರ ರಾಜ್ಯ ನಿಮ್ಮಣ್ಣ ಆಳಿದರೇನ |
ಸರಗಿಗಿ ನಿಮ ಕಾಲ ತೊಳದೆಲ್ಲ ||
ಸರಗಿಗಿ ನಿಮ ಕಾಲ ನಾವ್ಯಾಕ ತೊಳಿಯುನು ಧೊರಿಯ |
ಚಿತ್ತ ಬಲ್ಲವರ ಗುಣಕಾಗಿ ||೫||

ಆರೂರ ರಾಜ್ಯ ನಿಮ ತಮ್ಮ ಆಳಿದರೇನ |
ನತ್ತಿಗಿ ನಿಮ ಕಾಲ ತೊಳದೆಲ್ಲ ||
ನತ್ತಿಗಿ ನಿಮ ಕಾಲ ನಾವ್ಯಾಕ ತೊಳಿಯುನು ಧೊರಿಯೆ |
ಮುತ್ತೈದಿತನ ಪಡದೇವ ||೬||

* * * *

ಬಾಳಿಯ ಕಾಯಾಂಗ ಬಾಗಿ ಬಂದಳ ಬಾಲಿ |
ಭಾಗ ಕೊಡ ರಾಯಾ ಎಡದಲ್ಲಿ ||
ಭಾಗ ಕೊಡು ರಾಯ ಎಡದಲಿ ಸಾವಿರದ |
ಮಾಣಿಕ್ಯೇರವರ ಮಗಳೀಗಿ ||೭||

ನಿಂಬಿ ಕಾಯ್ಯಾಽಂಗ ತುಂಬಿ ಬಂದಳ ಬಾಲಿ।
ಇಂಬ ಕೊಡು ರಾಯಾಽ ಎಡಽದಲ್ಲಿ ॥
ಇಂಬ ಕೊಡು ರಾಽಯ ಎಡದಲ್ಲಿ ಸಾವಿರದ।
ಒಜ್ಜಿರ್ಬಿಃರವರಽ ಮಗಽಳಿಂಗಿ ॥೮॥

* * * *

ರಾಜರಾಜರು ಕೂಽಡಿ ರಾಜೆಲ್ಲ ಹುಡುಕಿದರ।
ಮತ್ತೆಲ್ಲ ತಂದ್ಯೋಽ ಚೆಲಽವಿಂನ॥
ಮತ್ತೆಲ್ಲಿ ತಂದ್ಯೋಃ ಚೆಲವಿಃನ ಹಲಸಂಗಿ।
ಆಗರದಾಗಿತ್ತೋಂದರಽಗಿಣಿಯ ॥೯॥

ಶೆಟ್ಟಿ ಶೆಟ್ಟೆರು ಕೂಽಡಿ ದಿಕ್ಕೆಲ್ಲಾ ಹುಡುಕಿದರ।
ಮತ್ತೆಲ್ಲ ತಂದ್ಯೋಽ ಚೆಲಽವಿನ॥
ಮತ್ತೆಲ್ಲಿ ತಂದ್ಯೋ ಚೆಲವಿಃನ ಹಲಸಂಗಿ।
ಜಾಳಿ ಬನದಾಸೋಂದರಽಗಿಣಿಯ ॥೧೦॥

# ಭೂಮದ ಹಾಡು

ಹಂದವ್ವೂರದಾಗ ಛಂದಽ ಛಂದಮೊಲಿ ಹೂಡಿ।
ಗಂದದ ಚೆಕ್ಕಿ ಪುಟೂ ಮಾಡಿ। ಸೋಃ॥
ನಂದಿಃ ಮನಾರಿ ಸೋಃ ॥೧॥

ಗಂಧುವದ ಚೆಕ್ಕಿ ಫುಡಿಮಾಡಿ ಮದುಮಗನ।
ಅಕ್ಕ ಮಾಡ್ಯಾಳೊಂದಡಽಗಿಃಯ। ಸೋಃ॥
ನಂದಿಃ ಮನಾರಿ ಸೋಃ ॥೨॥

ಹೇಂದವ್ವೂರದಾಗ ಛಂದಽ ಛಂದದೊಲಿ ಹೂಡಿ |
ಕಪ್ಪುರದ ಚಿಕ್ಕಿ ಪುಟಮಾಡಿ | ಸೋ ||
ನಂದೀ ಮನಾರಿ ಸೋ || ೩ ||

ಕಪ್ಪುವ್ವುರದ ಚಿಕ್ಕಿ ಪುಟಮಾಡಿ ಮದುಮಗನ |
ತಾಯಿ ಮಾಡ್ಯಾಳೊಂದಡಽಗೀಯ | ಸೋ ||
ನಂದೀ ಮನಾರಿ ಸೋ || ೪ ||

ಹಸಸುಳ್ಳ ಕಣಕೀಗಿ ಬಿಸಿನೀರ ಛಳಿಕೊಟ್ಟು |
ಎಸಳ ಯಾಲಕ್ಕೀ ಪುಡೀ ಬೆಲ್ಲಽ | ಸೋ ||
ನಂದೀ ಮನಾರಿ ಸೋ || ೫ ||

ಎಸಳ ಯಾಲಕ್ಕಿ ಪುಡಿ ಬೆಲ್ಲಽ ಛೆಜ್ಜಕದ |
ಬಿಸಿ ಹೋಳ್ಗಿ ಭೂಮಾಕ ಬರಽಬೇಕ | ಸೋ ||
ನಂದೀ ಮನಾರಿ ಸೋ || ೬ ||

ಸಣ್ಣುಳ್ಳ ಕಣಕೀಗಿ ಧಣ್ಣೀರಾ ಛಳಿಕೊಟ್ಟು |
ಸಣ್ಣ ಯಾಲಕ್ಕೀ ಪುಡೀ ಬೆಲ್ಲಽ | ಸೋ ||
ನಂದೀ ಮನಾರಿ ಸೋ || ೭ ||

ಸಣ್ಣ ಯಾಲಕ್ಕಿ ಪುಡಿ ಬೆಲ್ಲಽ ಹುರಣದ |
ಎಣ್ಣೋಳ್ಗಿ ಭೂಮಾಕ ಬರಽಬೇಕ | ಸೋ ||
ನಂದೀ ಮನಾರಿ ಸೋ || ೮ ||

ಹೊತ್ತಽಕ ಕರಕಽಕ ಕೆಜ್ಜೆಗ್ಗಳಾದಾಽವ |
ಹತ್ತು ಮಾಸಽದ ಪರಽಡೀಯ | ಸೋ ||
ನಂದೀ ಮನಾರಿ ಸೋ || ೯ ||

ಹತ್ತು ಮಾಸಽದ ಪರಡೀಯ ಪಾಯಸಾ |
ಮತ್ತೊಬ್ಬ ಜಾಣೆ ಎಡೀ ಮಾಡಽ | ಸೋ ||
ನಂದೀ ಮನಾರಿ ಸೋ || ೧೦ ||

ಮುತ್ತೊಬ್ಬ ಜಾಣಿ ಎಡಿ ಮಾಡs ತಂಗೆವ್ವಾ ।
ಮುತ್ತಿನ ಕಂಕಸಣ ತಿರsವೂತ । ಸೋ ॥
ನಂದೀ ಮನಾರಿ ಸೋ ॥ ೧೧ ॥

ಆರಾಕ ತೂರಾಕ ನೀರೆಗ್ಗ ಳಾದಾವs ।
ಆರ ಮಾನದs ಪರಡೀಯ । ಸೋ ॥
ನಂದೀ ಮನಾರಿ ಸೋ ॥ ೧೨ ॥

ಆರ ಮಾನದs ಪರಡೀಯ ಪಾಯಸ ।
ಪ್ಯಾಲೊಬ್ಬ ಜಾಣಿ ಎಡೀ ಮಾಡs । ಸೋ ॥
ನಂದೀ ಮನಾರಿ ಸೋ ॥ ೧೩ ॥

ಪ್ಯಾಲೊಬ್ಬ ಜಾಣೀ ಎಡಿ ಮಾಡs ತಂಗೆವ್ವಾ ।
ಹವಳದ ಕಂಕಣಾ ತಿರವೂತ ಸೋ ॥
ನಂದೀ ಮನಾರಿ ಸೋ ॥ ೧೪ ॥

ಮದುಮಗನ ಭೂಮಾಕs ಮತ್ತ್ಯಾನು ಬರಬೇಕ ।
ಇಪ್ಪತ್ತೊಂದಡಕೀ ಬಿಳೀ ಎಲಿಯ । ಸೋ ॥
ನಂದೀ ಮನಾರಿ ಸೋ ॥ ೧೫ ॥

ಇಪ್ಪಂತ್ತೊಂಡಕಿ ಬಿಳಿಯೆಲಿ ಕುಬಸಿನ ಗಳಿಗಿ ।
ಬಾಲನ ಭೂಮಾಕ ಬರsಬೇಕs । ಸೋ ॥
ನಂದೀ ಮನಾರಿ ಸೋ ॥ ೧೬ ॥

ಬನದಾಗ ಬಿತ್ತೂದು ಬನದಾಗ ಬೆಳಿಯೂದು ।
ಬನದಾಗ ಚಾಲೀ ಎರsಗೂದುs ಸೋ ॥
ನಂದೀ ಮನಾರಿ ಸೋ ॥ ೧೭ ॥

ಬನದಾಗ ಚಾಲಿ ಎರಗೂವ ಬಿದುರೀನ ।
ಬುಟ್ಟಿ ಭೂಮಾಕs ಬರsಬೇಕs । ಸೋ ॥
ನಂದೀ ಮನಾರಿ ಸೋ ॥ ೧೮ ॥

ಹಾಳಾಗ ಬಿತ್ತ್ಯಾದು ಹಾಳಾಗ ಬೆಳವ್ಯಾದು |
ಹಾಳಾಗಿಂಬಾಗಿ ಇರವ್ಯಾದ | ಸೋ ||
ನಂದೀ ಮನಾರಿ ಸೋ || ೧೯ ||

ಹಾಳಾಗಿಂಬಾಗಿ ಇರವ್ಯಾನ ನಿಂಬೀಯ |
ಹೋಳ ಭೂಪಾಕ ಬರಬೇಕ | ಸೋ ||
ನಂದೀ ಮನಾರಿ ಸೋ || ೨೦ ||

ಮಡ್ಡ್ಯಾಗ ಬಿತ್ತ್ಯಾದು ಮಡ್ಡ್ಯಾಗ ಬೆಳವ್ಯಾದು |
ತಂದವರ ಮನಿಗಿ ಬರುವ್ಯಾದ | ಸೋ ||
ನಂದೀ ಮನಾರಿ ಸೋ || ೨೧ ||

ತಂದೂವರ ಮನಿಗಿ ಬರುವ ಮುಕಣೀಯ |
ಹಪ್ಪಳ ಭೂಪಾಕ ಬರಬೇಕ | ಸೋ ||
ನಂದೀ ಮನಾರಿ ಸೋ || ೨೨ ||

ಎರಿಯಾಗ ಬಿತ್ತ್ಯಾದು ಎರಿಯಾಗ ಬೆಳವ್ಯಾದು |
ತಂದವರ ಮನೀಗೀ ಬರುವ್ಯಾದ | ಸೋ ||
ನಂದೀ ಮನಾರಿ ಸೋ || ೨೩ ||

ತಂದೂವರ ಮನಿಗಿ ಬರವ್ಯಾವ ಕಡಲೀಯ |
ಶಂಡಿಗಿ ಭೂಪಾಕ ಬರಬೇಕ | ಸೋ ||
ನಂದೀ ಮನಾರಿ ಸೋ || ೨೪ ||

ಮೆಂತಿಖಿಡ್ಡೀ ಹಾಕಿ ಅತ್ತೀ ತುಪ್ಪವ ಕಾಸ |
ಇಪ್ಪತ್ತೊಂದೋಣೀ ಎಸೆದಾವ | ಸೋ ||
ನಂದೀ ಮನಾರಿ ಸೋ || ೨೫ ||

ಇಪ್ಪತ್ತೊಂದೋಣಿ ಎಸೆದಾವ ಈ ತುಪ್ಪಾ |
ಬಾಲನ ಭೂಪಾಕ ಬರಬೇಕ | ಸೋ ||
ನಂದೀ ಮನಾರಿ ಸೋ || ೨೬ ||

ಶಾಂವಿಗಿ ನೈದಾನ ಹಾವಿಸಪ್ಪಿಸಕಾಯಿ ।
ಮ್ಯಾಲ ಕುರಡೀಯಡ ಇಡವ್ಯಾಡದ । ಸೋ ॥
ಸಂದೀ ಮಸಾರಿ ಸೋ ॥ ೨೭ ॥

ಮದುಮಗನ ಭೂಮಾಕ ಮತ್ತ್ಯಾರು ಬರಬೇಕ ।
ಅಪ್ಪಾದಾಗಪ್ಪಾ ಹಿರೀಯಪ್ಪಾ । ಸೋ ॥
ಸಂದೀ ಮಸಾರಿ ಸೋ ॥ ೨೮ ॥

ಅಪ್ಪಾದಾಗಪ್ಪಾ ಹಿರಿಯಪ್ಪಾ ತಾ ಬಂದು ।
ಮುಚ್ಚಿಟ್ಟ ಭೂಮಾ ತೆರುನ್ಯಾನ । ಸೋ ॥
ಸಂದೀ ಮಸಾರಿ ಸೋ ॥ ೨೯ ॥

ಮದುಮಗನ ಭೂಮಾಕ ಮತ್ತ್ಯಾರು ಬರಬೇಕ ।
ಅಣ್ಣಾದಾಗಣ್ಣಾ ಹಿರಿಯಣ್ಣಾ । ಸೋ ।
ಸಂದೀ ಮಸಾರಿ ಸೋ ॥ ೩೦ ॥

ಅಣ್ಣಾದಾಗಣ್ಣಾ ಹಿರಿಯಣ್ಣಾ ತಾ ಬಂದು ।
ಹೊನ್ನಿಟ್ಟ ಭೂಮಾ ತೆರುನ್ಯಾನ । ಸೋ ॥
ಸಂದೀ ಮಸಾರಿ ಸೋ ॥ ೩೧ ॥

ಮದುಮಗನ ಭೂಮಾಕ ಮತ್ತ್ಯಾರು ಬರಬೇಕ ।
ಅವ್ವಾದಾಗವ್ವಾ ಹಿರೀಯವ್ವಾ । ಸೋ ॥
ಸಂದೀ ಮಸಾರಿ ಸೋ ॥ ೩೨ ॥

ಅವ್ವಾದಾಗ ಅವ್ವಾ ಹಿರಿಯವ್ವಾ ತಾ ಬಂದು ।
ಉಂಗ್ರಿಟ್ಟು ಭೂಮಾ ತೆರನ್ಯಾನ । ಸೋ ॥
ಸಂದೀ ಮಸಾರಿ ಸೋ ॥ ೩೩ ॥

ಯಾವಣ್ಣಾ ಸೋತಾನ ಯಾವಣ್ಣಾ ಗೆದ್ದ್ಯಾನ ।
ಯಾವಣ್ಣಾ ನೀರಾ ಮುಗಿದಾನ । ಸೋ ॥
ಸಂದೀ ಮಸಾರಿ ಸೋ ॥ ೩೪ ॥

ಭೀಮಣ್ಣ ಸೋತಾನ ಕಾಮಣ್ಣ ಗೆದ್ದಾನ।
ನಮ್ಮಣ್ಣ ನೀರ ಮುಗಸದಾನ। ಸೋ॥
ಸಂದೀ ಮನಾರಿ ಸೋ ॥ ೩೫ ॥

---

# ಬೀಗರ ಹಾಡು

ಸರಕ್ಕ ಸರಿತಲ್ಲ ಬೀಗರ ಸುರಪ್ಪ ತಿಳಿತಲ್ಲ ॥ ಪ ॥

ಆನೀ ಬರತಾವಂತ ಆರs ಭಣವೀ ಕೊಂಡ।
ಆನೆಲ್ಲಿ ನಿಮ್ಮ ದಳವೆಲ್ಲಿ। ಸರಕ್ಕ ॥ ೧ ॥

ಆನೆಲ್ಲ ನಿಮ್ಮ ದಳವೆಲ್ಲ ಬೀಗಾ।
ಬೋಳ್ಗೋರಿ ಮ್ಯಾಲ ಬರತಾರ। ಸರಕ್ಕ ॥ ೨ ॥

ಒಂಟೀ ಬರತಾವಂತ ಎಂಟs ಭಣವೀ ಕೊಂಡ।
ಒಂಟೆಲ್ಲಿ ನಿಮ್ಮ ದಳವೆಲ್ಲಿ। ಸರಕ್ಕ ॥ ೩ ॥

ಒಂಟೆಲ್ಲಿ ನಿಮ್ಮ ದಳವೆಲ್ಲಿ ಬೀಗಾ।
ಕುಂಟ್ಗೋರಿ ಮ್ಯಾಲ ಬರತಾರ। ಸರಕ್ಕ ॥ ೪ ॥

ಬೀಗೂತೊಳ್ಳಿವಳಂತ ದೇವರಮನಿ ಕೊಟ್ಟ।
ದೇವರs ಕದ್ದಾಳ ಬಗಲಾಗ। ಸರಕ್ಕ ॥ ೫ ॥

ಬೀಗೂತೊಳ್ಳಿವಳಂತ ಅಡಗೀಯ ಮನಿ ಕೊಟ್ಟ।
ಹೋಳೀಗಿ ಘಳಿಗಿ ಬಗಲಾಗ। ಸರಕ್ಕ ॥ ೬ ॥

ಹೋಳೀಗಿ ಘಳಿಗಿ ಬಗಲಾಗ ಅವರಣ್ಣ।
ನೀಡ್ಲಿಕ್ಕಿಲ್ಲಂದು ಕಸಗೊಂಡ। ಸರಕ್ಕ ॥ ೭ ॥

ಬೀಗೂತೊಳ್ಳೀಕಂತ ಅಡಗೀಯ ಮನಿ ಕೊಟ್ಟ |
ಬಾನಾದ ದುರುಡಿ ಬಗಲಾಗ | ಸರಕ್ಕ || ೮ ||

ಬಾನೂಆದs ದುರುಡಿ ಬಗಲಾಗ ಅವರಣ್ಣಾ |
ನೀಡ್ಲಿಕ್ಕಿಲ್ಲಂತ ಕಸಗೊಂಡ | ಸರಕ್ಕ || ೯ ||

ಎಲ್ಲಾರು ಕಟ್ಟ್ಯಾರ ಮಲ್ಲೀಗ್ಹೂವಿನ ದಂಡಿ |
ಬೀಗೂತಿ ಕಟ್ಟ್ಯಾಳ ಹುಲ್ಹೊರಿಯ | ಸರಕ್ಕ || ೧೦ ||

ಬೀಗೂತಿ ಕಟ್ಟ್ಯಾಳ ಹುಲ್ಹೊರಿ ಅವರಣ್ಣಾ |
ಕುದರೀಗಿಲ್ಲಂದು ಕಸಗೊಂಡ | ಸರಕ್ಕ || ೧೧ ||

ಎಲ್ಲಾರು ಕಟ್ಟ್ಯಾರ ಗುಳ್ಳಬ್ಯಾಳೀ ಮಣಿ |
ಬೀಗೂತಿ ಕಟ್ಟ್ಯಾಳ ಕೈಪಾಳಿ | ಸರಕ್ಕ || ೧೨ ||

ಬೀಗೂತಿ ಕಟ್ಟ್ಯಾಳ ಕೈವಾಳಿ ಅವರಣ್ಣಾ |
ಬಳಸಲಕಿಲ್ಲಂತ ಕಸಗೊಂಡ | ಸರಕ್ಕ || ೧೩ ||

ಒಂದ ಅಡಕೀ ಒಡೆದು ಒಂಬತ್ತು ಮದುವಿ ಮಾಡಿ |
ಇಂದೀನ ಖರ್ಚ ಬಲು ಖರ್ಚ | ಸರಕ್ಕ || ೧೪ ||

ಇಂದೀನ ಖರ್ಚ ಬಲು ಖರ್ಚ ಬೀಗಾ |
ಖಂಬsದ ತೆಕ್ಕಿ ಬಿಡವಲ್ಲ | ಸರಕ್ಕ || ೧೫ ||

ಒಂದs ಎಲಿs ಹರಿದು ಒಂಬತ್ತು ಮದಿಮಾಡಿ |
ನಿನ್ನೀನ ಖರ್ಚ ಬಲು ಖರ್ಚ | ಸರಕ್ಕ || ೧೬ ||

ನಿನ್ನೀನ ಖರ್ಚ ಬಲು ಖರ್ಚ ಬೀಗಾ |
ಹಂದsರ ತೆಕ್ಕಿ ಬಿಡವಲ್ಲ | ಸರಕ್ಕ || ೧೭ ||

ಹಂದಾವೂರದಾಗ ಮಂದಿ ಬಂದು ಎಟ್ಟೊತ್ತಾಯ್ತು |
ಕಂಬಳಿಲ್ಲೀನ ಇವರಲ್ಲಿ | ಸರಕ್ಕ || ೧೮ ||

ಕಂಬಳಿಲ್ಲೇನ ಇವರಲಿ ಬೀಗುತಿ |
ಕಂಬ್ಳಿಗ್ಹೋಗ್ಯಾಳ ಮನಿ ಮನಿ | ಸರಕ್ಕ ||೧೯||

ಹಂದರಾದಾಗ ಮಂದಿ ಬಂದೆಟ್ಹೊತ್ತಾಯ್ತು |
ಕೂಕಂ ಇಲ್ಲೇನ ಇವರಲ್ಲ | ಸರಕ್ಕ ||೨೦||

ಕೂಕಂ ಇಲ್ಲೇನ ಇವರಲಿ ಬೀಗುತಿ |
ಕೂಕಮ್ಮಿಗ್ಹೋಗ್ಯಾಳ ಅಂಗಡೀಗಿ | ಸರಕ್ಕ ||೨೧||

ಅಚ್ಚೀಕ ಹೊಲಗೇರಿ ಇಚ್ಚೀಕ ಮಾದರಗೇರಿ |
ನಟ್ಟನಡಬರಕ ಶಿವಪೂಜಿ | ಸರಕ್ಕ ||೨೨||

ನಟ್ಟsನಡಬರಕ ಶಿವಪೂಜಿ ಆಗಟಿಗೆ |
ನಾಲತ್ತ ನಾಯಿ ಬೊಗಳ್ಯಾವ | ಸರಕ್ಕ ||೨೩||

## ಕೂಸು ಒಪ್ಪಿಸುವ ಹಾಡು



ಒಂಬತ್ತು ತಿಂಗಳು ನಿನ್ನ ತುಂಬಿಕೊಂಡು ತಿರುಗೇನs |
ಹಂಬಲಿಸೀ ನಿನ್ನs ಪಡೆದೇನ | ಸೋ ||
ಹಂಬಲಿಸೀ ನಿನ್ನs ಹಡೆದೇನs ಚಿತ್ರದ
ಗೊಂಬಿ ನಿನಗೊಪ್ಪಿಸಿ ಕೊಡಲ್ಯಾಂಗ | ಸೋ ||೧||

ಹತ್ತು ತಿಂಗಳು ನಿನ್ನs ಹೊತ್ತುಕೊಂಡು ತಿರುಗೇನs |
ಮುತ್ತುs ಸುರುವಿದರs ಬರಿ ಉಡಿಯs | ಸೋ ||
ಮುತ್ತು ಸುರುವಿದರ ಬರಿ ಉಡಿಯs ನನ ಮಗಳ |
ಅತ್ತೇರಿಗೊಪ್ಪಿಸಿ ಕೊಡಲ್ಯಾಂಗs | ಸೋ ||೨||

ಹರಿಯಾಗೆಪ್ಪಮ್ಮಗಳು ಹಾಲಾ ಬಾನುಣ್ಣೋಳು |
ತೂಗ ಮಂಚದಲಿ ಮಲಗೂಳ | ಸೋ

ತೂಗ ಮಂಚದಲಿ ಮಲಗೂಳ ನಮ್ಮಗಳು ।
ನಗುನಗುತ ಮನೆಯ ಬೆಳಗೂಳ। ಸೋಃ ॥ ೩ ॥

ಮುಂಜಾನೆದ್ದನ್ನಮ್ಮಗಳು ತುಪ್ಪಾ ಬಾನುಣ್ಣೂಳು ।
ಪಟ್ಟೆಮಂಚದಲಿ ಮಲಗೂಳ । ಸೋಃ ॥
ಪಟ್ಟೆಮಂಚದಲಿ ಮಲಗೂಳ ನಮ್ಮಗಳು ।
ಕಟ್ಟೂತ ಕತೆಯ ಹೇಃಳೂಳ । ಸೋಃ ॥ ೪ ॥

ತೊಟ್ಟೇಃಲ ತೂಗಂದ್ರ ಸಿಟ್ಟೇಃಲೆ ಕೂಡೋಃಳಽ ।
ಬಟ್ಟಽಲ ಬೆಳಗಾಕ ಅರಿಯಾಳ। ಸೋಃ ॥
ಬಟ್ಟಲ ಬೆಳಗಾಕಽ ಅರಿಯಾದ ಮಗಳನ್ನಽ ।
ಕೊಟ್ಟೇಃನು ಮಾವನ ಕೈಯೊಳಗ । ಸೋಃ ॥ ೫ ॥

ಮಸರೂ ಅನ್ನಾ ಕಲಸೀಃ ತುಮುಸಽ ಉಣ್ಣಂತ್ರೇಃಳಿ ।
ರಾಸೀಃಯ ಉಣಸೀಃ ಸಲಹಿಂದೆ। ಸೋಃ ॥
ರಾಸೀಃಯ ಉಣಸಿ ಸಲಹಿಂದೆ ನನ ಮಗಳ ।
ಕೂಸಽ ನನ ಮನಿಗೆ ಎರವಾದೆ । ಸೋಃ ॥ ೬ ॥

ಕುಂಬಳ ಕಾಯೀಃ ಒಯ್ದು ಕುಡಗೋಃಲ್ಗೆ ಕೊಟ್ಟಂಗೆ ।
ಇಂದ ನಮ್ಮಗಳ ಕೊಡತೀಃವ । ಸೋಃ
ಇಂದ ನಮ್ಮಗಳ ಕೊಡತೀಃವ ಪಾರ್ವಽತಿ ।
ಕಂದನ ಸರಿಮಾಡಿ ಸಲಹವ್ವಾ । ಸೋಃ ॥ ೭ ॥

ನಿಂಬೀಃಯಽನೇಃ ಹಣ್ಣಾ ನೆಂಬಿ ಗಿಣಿ ಒಯ್ದಾಂಗ ।
ಇಂದ ನಮ್ಮಗಳ ಕೊಡತೀಃವ । ಸೋಃ ॥
ಇಂದ ನಮ್ಮಗಳ ಕೊಡತೀಃವ ಪಾರ್ವಽತಿ ।
ಕಂದನ ಸರಿಮಾಡಿ ಸಲಹವ್ವಾ । ಸೋಃ ॥ ೮ ॥

ಒಂದರಬಿ ಹಾಸೀಃದ ಒಂದರಬಿ ಹೊಚ್ಚೇಃದ ।
ಇಂದರನ ಮಾಡಿ ಸಲಹೀಃದ ।ಸೋಃ ॥

ಇಂದರನ ಮಾಡಿ ಸಲಹಿ ಸಾಕಿದ ಮಗಳ ।
ಇಂದೀಗಿ ನಮಗ ಎರವಾದ್ಯಾ । ಸೋ ॥ ೯ ॥

ಆರರಬಿ ಹಾಸಿದ್ದೆ ಆರರಬಿ ಹೊಚ್ಚಿದ್ದೆ ।
ಆರೊರಸ ಮಗಳ ಸಲಹೀದ । ಸೋ ॥
ಆರೊರಸ ಮಗಳ ಸಲಹೀದ ಪಾರ್ವತಿ ।
ಇಂದೀಗೆ ನಮಗ ಎರವಾದ್ಯಾ । ಸೋ ॥ ೧೦ ॥

ಎಕ್ಕೀಯ ಗಿಡದಾಗ ಹಕ್ಕೀ ಬೋರ್ಯಾಡಿದಾಂಗ ।
ಅಕ್ಕ ನೀಲವ್ವನ ಬಳಗಾವು । ಸೋ ॥
ಅಕ್ಕನ ನೀಲವ್ವನ ಬಳಗದ ಕಣ್ಣೀರು ।
ಒಕ್ಕುಂದ್ಹೊಳಿಯಾಗೀ ಹರಿದಾವ । ಸೋ ॥ ೧೧ ॥

ಎಣ್ಣೀಯ ಕೊಡಕ ಸಣ್ಣಿರುವಿ ಕವಿದ್ಹಾಂಗ ।
ಕನ್ನಿ ಕಂದವ್ವನ ಬಳಗಾದ । ಸೋ ॥
ಕನ್ನಿ ಕಂದವ್ವನ ಬಳಗಾದ ಕಣ್ಣಾನ ನೀರಾ ।
ಸಣ್ಣ ಮುತ್ತಾಗಿ ಸುರಿದಾವ । ಸೋ ॥ ೧೨ ॥

ತುಪ್ಪದ ಕೊಡಕ ಕಟ್ಟಿರುವಿ ಕವಿದಾಂಗ ।
ಮಿತ್ರಿ ಕಂದವ್ವನ ಬಳಗಾದ ॥ ಸೋ ॥
ಮಿತ್ರಿ ಕಂದವ್ವನ ಬಳಗಾದ ಕಣ್ಣಾನ ನೀರಾ ।
ಉತ್ರಿ ಮಳಿಯಾಗಿ ಸುರಿದಾವ ॥ ಸೋ ॥ ೧೩ ॥

ಕಣಗೀಲ ಗಿಡದಾಗ ಗಿಣಿ ಹಿಂಡು ಕುಂತಾಂಗ ।
ಸಣ್ಣ ನೀಲವ್ವನ ಬಳಗಾವು । ಸೋ ॥
ಸಣ್ಣ ನೀಲವ್ವನ ಬಳಗದ ಕಣ್ಣೀರು ।
ಹನ್ನೊಂದ್ಹೊಳಿಯಾಗೀ ಹರಿದಾವ ॥ ಸೋ ॥ ೧೪ ॥

ಕಪ್ಪುರ ಗುಡ್ಡಕ ಬೆಂಕಿ ತಪ್ಪದಲೇ ಕೊಟ್ಹಾಂಗವ- ।
ರಪ್ಪನ ಹೊಟ್ಟಿ ತಳಮಳಿಸಿ । ಸೋ ॥

ಅಪ್ಪನ ಹೊಟ್ಟಿs ತಳಮಳಿಸಿ ಮಗಳ ನಿನ್ನ |
ಒಪ್ಪೀಸಿ ನಾವು ಕೊಡತೇವ || ಸೋ || ೧೫ ||

ಸುಡುವ ಬೆಂಕಿಗೆ ಎಣ್ಣೀ ಕೊಡವ ಸುರುವಿದ್ಹಾಂಗ |
ಹಡದವ್ವನ್ಹೊಟ್ಟಿ ತಳಮಳಿಸಿ | ಸೋ ||
ಹಡದವ್ವನ್ಹೊಟ್ಟಿ ತಳಮಳಿಸಿ ಮಗಳೆ ನಿನ್ನಾ |
ಕೊಡತೇವೊಪ್ಪೀಸಿ ಇವರೀಗಿ || ಸೋ || ೧೬ ||

ಸುಣ್ಣsದ ಭಟ್ಟ್ಯಾಗ ಧಣ್ಣೀರಾ ಹೊಯ್ದ್ಹಾಂಗs |
ಅಣ್ಣಾನ ಹೊಟ್ಟಿ ಹೊಯ್ದ್ಹಾಡೆ | ಸೋ ||
ಅಣ್ಣಾನ ಹೊಟ್ಟಿ ಹೊಯ್ದ್ಹಾಡೆ 'ನನ ತಂಗಿ |
ನನ್ನ ಮನಿಗಿಂದs ಎರವಾದೆ' || ಸೋ || ೧೭ ||

ಸಣ್ಣs ತಮ್ಮಾಗಿದ್ರ ತಣ್ಣsಗ ಇರತಿದ್ದೆ |
ಮಾನ್ಯೆದ್ಹೊಲದಾಗs ಸರಿಪಾಲು | ಸೋ ||
ಮಾನ್ಯೆದ್ಹೊಲದಾಗs ಸರಿಪಾಲು ತಕ್ಕೊಂಡು |
ಚಿನ್ನಾ ನನ್ನ ಹಂತೇಲಿ ಇರತಿದ್ದೀ || ಸೋ || ೧೮ ||

ಒಮ್ಮನ ಮದ್ದಿಗೆ ಬೆಂಕಿ ಒಮ್ಮಿಲೇ ಕೊಟ್ಹಾಂಗs |
ತಮ್ಮನs ಹೊಟ್ಟೀ ತಳಮಳಿಸೆ | ಸೋ ||
ತಮ್ಮನ ಹೊಟ್ಟೀ ತಳಮಳಿಸೆ 'ಅಕ್ಕಾ ನನಗ |
ರಮ್ಮೀಸಿ ಹಣ್ಣು ಕೊಡುತಿದ್ದೀ' | ಸೋ || ೧೯ ||

ಹಿರಿಯ ಅಣ್ಣಾಗಿದ್ರ ಸರಿಯಾಗಿರುsತಿದ್ದೆ |
ಎರಿಯ ಹೊಲದಾಗs ಸರಿಪಾಲು | ಸೋ ||
ಎರಿಯ ಹೊಲದಾಗs ಸರಿಪಾಲು ತಕ್ಕೊಂಡು ||
ಧೊರಿಯೇ ನನ್ಹಂತೇಲಿರತಿದ್ದೀ | ಸೋ || ೨೦ ||

ಅತ್ತೀನ ಕರಿರೆವ್ವಾ ಅತಿಗೀನ ಕರಿರೆವ್ವಾ |
ನಾದಿನಿನ ಕರಿರೆವ್ವಾ ಹೊರೀಯಾಕ | ಸೋ ||

ಸಾದಿನಿನ ಕರಿರೆವ್ವಾ ಹೊರಿಯಾಕ ಅವರೀಗೆ ।
ಪ್ರೀತಿಯ ಮಗಳನ್ನು ಕೊಡರೆವ್ವಾ । ಸೋ ॥ ೨೧ ॥

ನಮ್ಮ ಮಗಳಲ್ಲವ್ವಾ ನಿಮ್ಮ ಮಗಳೀಕೆಂದು ।
ಛಂದಾಗಿ ಮಗಳನ್ನ ಸಲಹವ್ವಾ । ಸೋ ॥
ಛಂದಾಗಿ ಮಗಳನ್ನ ಸಲಹವ್ವಾ ಅನ್ನೂತ ।
ಅತ್ತೆನ್ನ ಕಯ್ಯಾಗ ಕೊಡರೆವ್ವಾ । ಸೋ ॥ ೨೨ ॥

ಹೆಣ್ಣಾವ ನಿಮಗಾಗಿ ಬಣ್ಣಾವ ನಮಗಾಗಿ ।
ಎಣ್ಣೋಳಿಗಿ ತುಪ್ಪ ನಭೆಗಾಗಿ ॥
ಎಣ್ಣೋಳಿಗಿ ತುಪ್ಪ ನಭೆಯ ಸಾಕ್ಷಿನ ಹೇಳಿ ।
ಇಂದ ನಮ್ಮಗಳ ಕೊಡತೀವ ॥ ೨೩ ॥

ಹಂದರ್ಗಂದರ ಸಾಕ್ಷಿ ಹಂದರ ತಳವಲ ಸಾಕ್ಷಿನ ।
ಹಂದರದಾಗಿರುವ ದೈವ ಸಾಕ್ಷಿ ॥
ಹಂದರದಾಗಿರುವ ದೈವ ಸಾಕ್ಷಿನ ಹೇಳಿ ।
ಇಂದ ನಮ್ಮಗಳ ಕೊಡತೀವ ॥ ೨೪ ॥

ಎಣ್ಣಿ ನೀಡಲಿ ಬ್ಯಾಡ ನೆತ್ತಿ ಖಸಿಯಲಿ ಬ್ಯಾಡಾ ।
ಅನ್ನಿಗರ ಮಗಳಂದನಬ್ಯಾಡ ॥
ಅನ್ನಿಗರ ಮಗಳೆಂದನಬ್ಯಾಡ ತಂಗೆವ್ವಾ ।
ಬಾಲಕನ ಸರಿಯ ಬಗಿಯವ್ವಾ ॥ ೨೫ ॥

ತುಪ್ಪ ನೀಡಲಿ ಬ್ಯಾಡ ನೆತ್ತಿ ಖಸಿಯಲಿ ಬ್ಯಾಡ ।
ಎಂಥವರ ಮಗಳಂತ ಕರಿಬ್ಯಾಡ ॥
ಎಂಥವರ ಮಗಳಂತ ಕರಿಬ್ಯಾಡ ತಂಗೆವ್ವಾ ।
ಪುತ್ರನ ಸರಿಯ ಬಗಿರೆವ್ವಾ ॥ ೨೬ ॥

ಹೆಣ್ಣ ಇವರಿಗಾದ್ಯಾ ಹೊನ್ನ ಇವರಿಗಾದ್ಯಾ ।
ಎಣ್ಣೋಳಿಗಿ ತುಪ್ಪಾ ಜನಕಾದ್ಯಾ । ಸೋ ॥

ಎಣ್ಣೋಳಿಗಿ ತುಪ್ಪಾ ಜನಕಾಗಿ ಗಂಡಿನ ತಂದಿ |
ಸಣ್ಣಾ ನಗೀ ನಗತಾ ನಡದಾನು || ಸೋ || ೨೭ ||
ಸಣ್ಣಾ ನಗೀನಗತಾ ನಡದಾನು ಬಂಕನಾಥಾ |
ಹೆಣ್ಣೊಲ್ಲ ಇನ್ನ ಜಲಮಾಕs | ಸೋ || ೨೮ ||

---

## “ ಮನಸ ಜೈನರ ಮಡದಿ ”



ಮನಸಸ ಜ್ಯೆನರ ಮಡದಿಽ ಬಾಽ
ಘನಮನಸಿನ ಗಂಭೀರೆಽ ಬಾಽ
ಘನಮನಸೀಂಬೊ ಗರತ್ಯಾರು ಮೆಚ್ಚಿ
ನೀಲಽ ಬಾಽಽ ನೀಲಽ ಸೀಲಽಽ ಬಾಽಽ
ಸೋಂಗಿನ ಗೊಂಬೆ ನೀ ಬಾರ ಹಸಿಯ ಜಗಽಽಲೀಂಗೇ ಸೋ ||೧||

ಅನಂದರಾಂಪುರ ಇಗತೀ ಬಾ
ಆದಿಪುರುಷರ ಸತಿಯಳು ಬಾ
ಅದರ ಮ್ಯಾಲ ಪೂರ್ವಾ ಸೀಮ್ಯಾಲ ಗುರುಳಿ
ಜೂಜ ಬಾಽ ಬಾ ಬಾ ಮೈತ್ರಿ ಬಾಽಽ
ಪುಣ್ಯಫಲ ಮೈತ್ರಿ ನೀ ಬಾರಽ ಹಸಿಯ ಜಗಽಽಲೀಂಗೇ ಸೋ ||೨||

ನಾಗೀಂದ್ರಸರಗಲ್ಲವು ಬಾ
ಅರಗಲ್ಲದ ರೂಪವು ಬಾ
ಹೋಂಯಿತು ಸರ್ವಾ
ಎಡವಲಿ ಕುಳಿತ
ಕಲ್ಪ ಬಾಽ ಬಾ ಬಾ ಫಣಿಯವು ಬಾ
ಸೋಂಗಿನ ಗೊಂಬೆ ನೀ ಬಾರ ಹಸಿಯ ಜಗಽಽಲೀಗೇ ಸೋ ||೩||

ಮಂದಗಮನೆ ವೋಂವನ್ನೇ ಬಾ
ಗಂಧ ಕಸ್ತೂರಿ ಪರಿಮಳ ಬಾ
ನನ್ನಾಣೆ ಬಾಽ ಕಟ್ಟಾಣೆ ಬಾ
ಧನ ಧನಿಯಳು ಬಾಽ
ಕೂಕಮದಾಗಿನ ಭರಣಿ ಬಾರೊಂದ್ಹಸೀ ಜಗಽಽಲೀಗೇ ಸೋ ||೪||

ಮಾಣಿಕದಾಗಿನ ಏಣವ್ರ ಬಾ
ಜೋಡ ಮುತ್ತಿನ ಬಾಣೇ ಬಾ
ಚಂದ್ರನ ಸೊಸಿಯೇ ಬಾ
ಇಂದ್ರನ ಸತಿಯಳು ಬಾ
ಭಂಗರದಾಗಿನ ಭರಣಿ ಬಾರೊಂದ್ಪಸಿಯ ಜಗ್ಗಲೀಗೇ ಸೋ ॥ ೫ ॥

ಮಂಗಳ ಮಹಿಮನ ರಾಣೀ ಬಾ
ಶ್ರೀಂಗಾರದ ಮದ್ದಾನೇ ಬಾ
ಕುಂಬಕುಚಗಳು ನಲನಲಿದಾಡುತ
ರಂಬೀ ಬಾ ದೇಶದ ಗೊಂಬಿ ಬಾ
ಅಂಗ್ರೈನೀಂಗ ನೀ ಬಾರs ಹಸಿಯ ಜಗ್ಗಲೀಗೇ ಸೋ ॥ ೬ ॥

## "ಹಿಂಬಳಿ ಮುಂಬಳಿ"

ಹಿಂಬಳಿ ಮುಂಬಳಿ ಗಂಧದ ಗೀರಾ
ಹೊಂದಿಸಿ ಇಟ್ಟ್ಯಾಳ ಛಂದ ಗಿದಾಕಿ
ಜಾತ ಮಲ್ಲಿಗಿ ಜಾಳಿಗಿ ದಂಡಿ
ವಾಸ್ನ್ಯಾಡು ತುರುಬ ಒನಪಿಲಿ ಕಟ್ಟಿ
ಖನ್ನಿ ಕೋಮಲಿ ಹಸೀಗೇಳs ಸೋ ॥ ೧ ॥

ನೀರೆಯ ಬಾವುಲಿ ಲಿಗಿಲಿಗಿನಾಡುತ
ಕಾಲುಂಗ್ರ ಪಿಲ್ಲ್ಯಾ ಝುಗಝುಗ ಹೊಳವುತ
ಹೊನ್ನಾ-ಭರಣಾ ಹರಡಿಗಿ ಮಲಕs
ಹೊನ್ನ ಪುತ್ತಳಿ ರುಳಿ ಸರಿಗಿಟಗೊಂಡು
ಕೋಗಿಲ ಮದ್ದಾನೇ ಹಸಿಗೇಳs ಸೋ ॥ ೨ ॥

ಇದುರಿನ ಮನಿಯ ಬಿದರೊಂಕೆವರ
ಮನ್ನುಸಿದಾರ ಮನಿ ಹೊಕ್ಕವರ

ಹೆತ್ತು ಮಾದಿಲಿ ಪಂತಿಲಿ ಕುಂಡ್ರೋ
ಚಿತ್ರಬಲ್ಲಬೋ ಶಿವಶಂಕರಗ
ಚಿತ್ರಾಂಗದರಸಾ ಹಸೀಗೇಳೋ ಸೋ ॥ ೩ ॥

ನಿಲಗುದರೆಂಬೋ ತೇಜಿಯನೇರಿ
ಮದನಾರಿ ಬಂದು ಬಾಗಿಲ್ಗಿ ನಿಂತs
ವಾರಿಗಿ ಗೆಳೆದ್ಯಾರು ಒಡಗೊಂಡು ಕರದರ
ಬಾ ಎನ್ನ ಮಡsದೀ ಹಸಿಗೇಳs ಸೋ ॥ ೪ ॥

ಇಂಜನ ಮಳಿಯ ಗಂಧದ ಗೀರ
ಇಂದ್ನವು ತಂಗೆಮನ ಗಂಡನ ನದರs
ಇಂದ್ರನ ಖಳಿಯುಳ ಚಂದ್ರನ ಮಗಳ
ಇಂದ ಮನ್ನಸರೀ ಶುಬsದಿಂದ ಸೋ ॥ ೫ ॥

## "ರನ್ನದುಡುಗುಣಿ"

ರನ್ನದುಡುಗುಣಿ ಚಿನ್ನದ ಕೊಂಡಿ
ಹೊನ್ನಿನಾ ಡಾಬಾ ಇಟ್ಟೆದಳs।
ಎಣಕಿನಿಲ್ಲದೆ ಮಾಣಿಕಸsರ
ಎದಿಬದಿ ತಾನು ಹಾಕುವಳs।
ಕಡಿಯ ಕಂಕಣ ಕಮಳದ ಮುಖಿಯ
ಹೊಳಿವ ಮುತ್ತಿನ ವಾಲಿಗಳs।
ಜಯ ಜಯ ಮಂಗಳs। ಜಯ ಜಯ ಮಂಗಳs।
ಸುಂದರಿ ಸಾಂಬನಿಗೇ। ಜಯ ಜಯ ಮಂಗಳs ॥ ೧ ॥

ಕಸೂತಿ ಕುಬಸಾ ಕೈಯಲಿ ಕನ್ನಡಿ
ನೆರsಳ ನೋಡಿ ಹಿಗ್ಗುವಳs।
ಬಸವೇಸೂರನ ಎಡೆದಲಿ ಕುಂತು

ಹಸ್ಯಾಮಾಡಿ ತಾ ನಗುವಳು |
ಕಡಿಯ ಕಂಕಣ ಕಮಳದ ಮುಖಿಯ
ಹೊಳಿವ ಮುತ್ತಿನ ವಾಲಿಗಳು !
ಜಯ ಜಯ ಮಂಗಳು | ಜಯ ಜಯ ಮಂಗಳು |
ಸುಂದರಿ ಸಾಂಬನಿಗೇ | ಜಯ ಜಯ ಮಂಗಳು || ೨ ||

ಮುಗಿನಾಗ ಹೊಳಿವ ಮುತ್ತಿನ ಮೂಗುತಿ
ಮಿಗಿಲಾದ ಆಭರಣಿಟ್ಟಿದಳು |
ಅಚ್ಚರಂಗದ ಶಾಲನುಟ್ಟು
ಅನಂತ ಕೋಟಿ ರೂಪವಳು |
ಕಡಿಯ ಕಂಕಣ ಕಮಳದ ಮುಖಿಯ
ಹೊಳಿವ ಮುತ್ತಿನ ವಾಲಿಗಳು |
ಜಯ ಜಯ ಮಂಗಳು | ಜಯ ಜಯ ಮಂಗಳು |
ಸುಂದರಿ ಸಾಂಬನಿಗೇ | ಜಯ ಜಯ ಮಂಗಳು || ೩ ||

ದುಂಡಗೈಯವಳು ದಿಮಿದಿಮಿಗಾರಳು
ದುಂಡಮುತ್ತಿನ ವಾರಳು |
ಹಿಂಡ ಗೆಳದ್ಯಾರು ಕಂಡುಸಿ ಕರದರ
ಹೆಣೂಲ ಭಂಗಾರ ಹಾಕುವಳು |
ಕಡಿಯ ಕಂಕಣ ಕಮಳದ ಮುಖಿಯ
ಹೊಳಿವ ಮುತ್ತಿನ ವಾಲಿಗಳು |
ಜಯ ಜಯ ಮಂಗಳು | ಜಯ ಜಯ ಮಂಗಳು |
ಸುಂದರಿ ಸಾಂಬನಿಗೇ | ಜಯ ಜಯ ಮಂಗಳು || ೪ ||

ಧನೂರ ಬಣ್ಣಾ ಶಾಲ ಕೈಯಲಿ
ಐದು ಅಂಕುಶಾ ಹಿಡಿದವಳು
ಜಯ ಜಯ ಮಂಗಳು | ಜಯ ಜಯ ಮಂಗಳು |
ಸುಂದರಿ ಸಾಂಬನಿಗೇ | ಜಯ ಜಯ ಮಂಗಳು || ೫ ||

---

# " ಬಾಲಿ ತಾ ಮೈನೆರದು "

ಬಾಲಿ ತಾ ಮೈನೆರದು ಬಾಗಿಲವಾಗ ನಿಂತಾಳ |
ಬಾಳೀಲಿ ಹಂಗ ಮಕ ಬಾಡೀ | ಸೋ ||೧||

ಬಾಳೀಲಿ ಹಂಗ ಮಕ ಬಾಡಿ ಅವರವ್ವಾ |
ಬಾ ಬಾಲಿನಂದ ಕರದಾಳ | ಸೋ ||೨||

ರಂಬಿ ತಾ ಮೈಯನೆರದ ಅಂಗಳದಾಗ ನಿಂತಾಳ |
ನಿಂಬೆಲಿ ಹಾಂಗ ಮಕ ಬಾಡೀ | ಸೋ ||೩||

ನಿಂಬಿಯ ಎಲಿ ಹಂಗ ಮಗ ಬಾಡಿ ಅವರವ್ವಾ |
ಬಾ ರಂಬಿನಂದು ಕರದಾಳ | ಸೋ ||೪||

ಓದೂವ ಸಾಲ್ಯಾಗ ಮೂವಯ್ಯ ಕುಂತಾನ |
ಸಸಿ ಹೋಗಿ ಕಾಲಾ ಹಿಡದಾಳ | ಸೋ ||೫||

ಸಸಿ ಹೋಗಿ ಕಾಲಾ ಹಿಡಿದು ತಾ ಕೇಳ್ಯಾಳ |
ಗೊಂಬಿಲ್ಲರಿ ನಮ್ಮ ಎಡಕಬಲಕ | ಸೋ ||೬||

ಬಡಗ್ಯಾರ ಕರಸ್ಯಾರ ಹಿಡಿ ಹೊನ್ನ ಕುಡಸ್ಯಾರ |
ಚಂದನದ ಗೊಂಬಿ ಕೆತ್ತಸ್ಯಾರ | ಸೋ ||೭||

ವಡ್ಡರನ ಕರಸ್ಯಾರ ಹಿಡಿ ಹೊನ್ನ ಕೊಡಸ್ಯಾರ |
ಅಂಗಳದಾಗ ಭಾವಿ ತೊಡಸ್ಯಾರ | ಸೋ ||೮||

ಅಂಗಳದಾಗಿನ ಭಾವಿ ತೊಡಸ್ಯಾರ ತಂಗೆವ್ವಾ |
ಇಲ್ಲೇ ಮೀಯ್ಯವ್ವ ಹೊಲಿನೀರ | ಸೋ ||೯||

ನೀರ ಮಡಕ ಬಿಟ್ಟು ಹಾಲ ಮಡಕ ಹೋಗಿ |
ಹಸನಾಗಿ ಒಗಿರಿ ಮಡೀಗೋಳ | ಸೋ ||೧೦||

ಹಸನಾಗಿ ಒಗಿರಿ ಮಡಿಗೋಳ ಈ ಮಸಿಗಿ ।
ದಸಿಮಕದಳಿಯ ಬರುತಾನ । ಸೋ ॥ ೧೨ ॥

## "ಹಣಿಯೆಂಬೊ ಭಾಂವಕ"

ಹಣಿಯೆಂಬೊ ಭಾಂವಕ ಹೆಣಿಯೆಂದ ವಂಡಿಯ ।
ಮಗ್ಗಿ ತಿರುವಂದ ಮಲಕೀಲಿ । ಸೋ ಎನ್ನೀರೆ ॥ ೧ ॥

ಹುಬ್ಬಂಬು ಭಾಂವಕ ತಿಮ್ಮೊಂದ ದಂಡಿಯ ।
ಗೊನಿಯ ತಿರುವಂದ ಮಲಕೀಲಿ । ಸೋ ... ॥ ೨ ॥

ಕಡಗದ ಇದನ್ಯಾರ ಕಡಗಣ್ಣಿಲಿ ನೋಡ್ಯಾರ ।
ಕೊಡವಿಗಿ ತಮಗ ವರನಂದ । ಸೋ ... ॥ ೩ ॥

ದ್ವಾರ್ಯಾಗೋಡಿನ್ಯಾರ ಪಾರಿಯ ನೋಡ್ಯಾರ ।
ನಾರಿಗಿ ತಮಗ ವರನಂದ । ಸೋ .. ॥ ೪ ॥

ಹಸಿಯ ಜಗಲಿಯ ಮ್ಯಾಲ ಒಯ್ದಿಟ್ಟರ ಭಾಸಿಂಗ ।
ತಂಗೆವ್ವಾ ಹೋಗಿ ತಗತಾರ । ಸೋ ... ॥ ೫ ॥

ತಂಗೀಯವ್ವಾ ಹೋಗಿ ತಗತಾರ ಭಾಸಿಂಗ ।
ನಂದಿ ಸೋಪನದ ಸಸಲಿಗಿ । ಸೋ ... ॥ ೬ ॥

ದಂಡಿ ತಂದಣ್ಣಾಗ ಕೂಡ್ರು ಗದ್ದಿಗ್ಗಾಕಿ ।
ಗುಂಡ ಗದ್ದ್ಯಾಣದ ಹೊಲ ಕೊಟ್ಟ । ಸೋ ... ॥ ೭ ॥

ಗುಂಡನೆ ಗದ್ದ್ಯಾಣದ ಹೊಲ ಕೊಟ್ಟ ತಮ್ಮಾಗ ।
ದಂಡಿ ತಂದಣಗ ಉಣಕೊಟ್ಟ । ಸೋ .... ॥ ೮ ॥

# "ಹಸುಮಗಳಽ ನೀಲಮ್ಮ"

ಹಸುಮಗಳ ನೀಲಮ್ಮ ಬಸವಗ ಶರಣೆನ್ನ ।
ನಸಲಿ ಮಾರಗದ ವಡಿಯಾಗ । ಈ ಶರಣವು ಮಾಡಿ ।
ಹಸಿಗಿ ಬಾಗನ್ನಿ ಗರುಡಽವ ॥ ೧ ॥

ಹಕ್ಕಿ ಹಸಿಗೊಯ್ಯ ಕೋಗಿಲ ಪತ್ತಽಲೊಯ್ಯ ।
ಅಕ್ಕ ನಾಗಮ್ಮ ಕತೀ ನಡಿಸ । ಈ ಸೋಬಾನಾ ।
ಸಾಗನೂರವರ ಮನಿಯಾಗ ॥ ೨ ॥

ಅರಸರ ಹೇಂಡಽರ್ಯಾ ಆರವತ್ತಿನ ರಾಣ್ಯಾರ್ಯಾ ।
ನೀಲವಽರಣ ಬಳಿಯವರ್ಯಾ । ನಮ್ಮವ್ವಗಳಿರ್ಯಾ ।
ಬೇಗ ಸೋಬನಕ ಬರಽಬೇಕ ॥ ೩ ॥

ಗೌಡರ ಹೆಂಡರ್ಯಾ ಆರವತ್ತಿನ ರಾಣ್ಯಾರ್ಯಾ ।
ನೀಲವಽರಣದ ಬಳಿಯವರ್ಯಾ । ನಮ್ಮಕ್ಕಗಳಿರ್ಯಾ ।
ಬೇಗ ಸೋಬನಕ ಬರಽಬೇಕ ॥ ೪ ॥

ಹಂದಽರ ಮ್ಯಾಲಲ್ಲಿ ಜೋಡೆಡ್ಡು ಗಿಣಿ ಕೂತು ।
ಪೆಂಕನಲ್ಲಾಡಿ ನಗತಾವ । ಅವು ಮಾತಾಡ್ಯಾವ ।
ಅಕ್ಕ ಭಾವಾಗ ವರನಂದ ॥ ೫ ॥

ಕುಂಬೀಯನೆ ಮ್ಯಾಲ ಜೋಡೆಡ್ಡ ಗಿಣಿ ಕುಂತ ।
ಕಂಗನಲ್ಲಾಡಿ ನಗತಾವ । ಅವು ಮಾತಾಡ್ಯಾವ ।
ತಂಗಿ ಮೈದುನಗ ವರನಂದ ॥ ೬ ॥

ಇಟ್ಟು ಹಾಡನೆಲ್ಲ ಒತ್ತಿ ಭರಣಾವ ತುಂಬಿ ।
ವಜ್ಜರದ ಕೀಲಿ ಜಡಽದೇವ । ಈ ನಮ್ಮಽ ಹಾಡ ।
ಸೋಬನಿದ್ದಲ್ಲಿ ತಗಽದೇವ ॥ ೭ ॥

# ಕುಬಸಾ ಮಾಡೂ ಹಾಡು



ಒಂದಂಬು ತಿಂಗಳಿಗಿ ಒಂದೇನ ಬಯಸ್ಯಾಳ।
ಅಂಗೈಯಲುವ್ವಾ ಎಳೆಹುಣಸಿ ॥ ೧ ॥

ಎರಡಂಬು ತಿಂಗಳಿಗಿ ಎರಡೇನ ಬಯಸ್ಯಾಳ।
ಎರಡೆಲಿಗೊಂಡ ಎಳೆಮಾವ ॥ ೨ ॥

ಮೂರಂಬು ತಿಂಗಳಿಗಿ ಮೂರೇನ ಬಯಸ್ಯಾಳ।
ಮೂಡಲ ದಿಕ್ಕಿನ ಮಗಿಮಾವ ॥ ೩ ॥

ನಾಕಂಬು ತಿಂಗಳಿಗಿ ನಾಕೇನ ಬಯಸ್ಯಾಳ।
ಕಾಕೀಯ ಹಣ್ಣು ಕೈತುಂಬಾ ॥ ೪ ॥

ಐದಂಬು ತಿಂಗಳಿಗಿ ಐದೇನ ಬಯಸ್ಯಾಳ।
ಕೊಯ್ದು ಮಲ್ಲೀಗಿ ಸನಿದಂಡಿ ॥ ೫ ॥

ಆರೆಂಬು ತಿಂಗಳಿಗಿ ಆರೇನ ಬಯಸ್ಯಾಳ।
ಆರಾಕಿದ ಬಾನ ಕೆನಿ-ಮಸರ ॥ ೬ ॥

ಏಳಂಬು ತಿಂಗಳಿಗಿ ಏಳೇನ ಬಯಸ್ಯಾಳ।
ಹೇಳಿ ಕಳುವ್ಯಾಳ ತವರಿಗಿ ॥ ೭ ॥

ಎಂಟೆಂಬು ತಿಂಗಳಿಗಿ ಎಂಟೇನ ಬಯಸ್ಯಾಳ।
ಕಂಟಲ್ಯಾಲಕ್ಕಿ ಕೊಡ ತುಪ್ಪ ॥ ೮ ॥

ಒಂಬತ್ತು ತಿಂಗಳಿಗಿ ತುಂಬ್ಯಾವ ನವಮಾಸ।
ಸಂದು ಸಂದೆಲ್ಲ ಕಿರಿಬ್ಯಾನಿ ॥ ೯ ॥

ವ್ಯಾಳ್ಯವ್ಯಾಳ್ಯಕೆ ಬ್ಯಾನಿ ತಾಳ ಬಾರಿಸಿದಂಗ।
ತಾಳಲಾರೆನೆ ನಿಲ್ಲಲಾರೆನವ್ವಾ। ತಾಯವ್ವನಿರಬೇಕು ಒನ್ನಕ ॥ ೧೦ ॥

ಹೊತ್ತು ಹೊತ್ತಿಲೆ ಬ್ಯಾನಿ ಕತ್ತೀಲೆ ಕಡ್ದಂತೆ।
ಹೆತ್ತವ್ವನಿರಬೇಕ ಜನ್ಮಕ || ೧೧ ||

ಹತ್ತಂಬು ತಿಂಗಳಿಗಿ ಹೆತ್ತಾಳ ಹಸಗೂಸ।
ಸುತ್ತೆಲ್ಲ ನೆರದಾರ ಸುಮಂಗಲೇರು || ೧೨ ||

---

# ಬಯಕೆಯ ಹಾಡು

ಕಸಕಸಿ ಕೊಬ್ಬರಿ ಹಸಸುಳ್ಳ ಜಿಲಿಬಿಲಿ।
ಬಿಸಿಯ ಹೂರಣಗಡಬ ಬಿಳಿಯ ಬೆಲ್ಲss।
ರಸಬಾಳಿ ಖಬ್ಬ ಸುಲಿದು ಮುಂದಿಟ್ಟರ।
ಇಸಮಾಡಿ ಒಂದ ತುತ್ತ ತಿಂದೇನ ತಾಯಿ।
ಬಂಕಿ ಕಾಡತಾವ ತಾಯಿ ಪರಿಪರಿಯಿಂದ
ಬಂಕಿ ಕಾಡತಾವ || ೧ ||

ಆಕಳ ಹಾಲಾಗ ದುಪ್ಪಸ ಮಾಡ।
ಪರಡಿ ಸವತೀಬೀಜ ಪಾಯಸ ಮಾಡ।
ಯಾಲಕ್ಕಾಯ ಪತ್ತುರಿ ಜಾಜಿಕಾಯಿ ಮೊದಲುಮಾಡಿ।
ಇಷ್ಟ ಸಾಹಿತನೆಲ್ಲ ಹದಮಾಡ ತಾಯಿ।
ಬಂಕಿ ಕಾಡತಾವ || ೨ ||

ಗಂಗಾಳ ಝರಗಿ ಝುಳಝುಳ ಬೆಳಗ।
ತೇಂಬೀಗಿ ತುಂಬಿ ಬದಿಯಲ್ಲಿ ಇಡs।
ಡೊಣ್ಣಿ ತುಂಬ ತುಪ್ಪ ತಂದು ಮುಂದಿಟ್ಟರ।
ಬಟ್ಟಿದ್ದಿ ಬಾಯಾಗ ಇಟ್ಟೇನ ತಾಯಿ।
ಬಂಕಿ ಕಾಡತಾವ || ೩ ||

ಎಳ್ಳ ಹಚ್ಚಿದ ರೊಟ್ಟಿ ಎಣ್ಣಿ ಬದನೀಕಾಯಿ।
ಮಸರ ಕಲಸಿದ ಬುತ್ತಿ ಬಿಸಿಯ ಬಾನ।
ಅಲ್ಲ, ಮಾಗುಣಿ ಬೇರ, ಬೆಲ್ಲ, ಬೆಳವಲದ್ಹಣ್ಣು।
ಮನ ಬೇಡಿ ನನ ಜೀವ ಬಗಸ್ಯಾದ ತಾಯಿ।
ಬಂಕಿ ಕಾಡತಾವ ॥ ೪ ॥

ಹೋಳಿಹುಣ್ವಿ ಸುತ್ತ ತಸುಗಾಳಿ ಬೀಸ್ಯಾವ।
ಮಾಳೀಗಿ ಏರಿ ಬೆಳಕಿಂಡಿ ಮುಚ್ಚ।
ಬಣ್ಣಕ್ಕದ ಹಚ್ಚಡ ಬಿಗಿಬಿಗಿದು ಹೊಚ್ಚಿದರ।
ಕಣ್ತುಂಬ ಒಂದು ನಿದ್ದಿ ಮಾಡೇನ ತಾಯಿ।
ಬಂಕಿ ಕಾಡತಾವ ॥ ೫ ॥

ಕುಂತರ ಆಕಡಿಕಿ ನಿಂತರ ತೂಕಡಿಕಿ।
ತಾಳಲಾರೆನೆ ತಾಯಿ ತೋಳಾರೆ ತಾರ।
ಮಂಚಕ ಒಪ್ಪುತ ಹಾಸೀಗಿ ಮಾಡ।
ಮಂಚಕ ಎನ್ನ ಎಳದ್ಹಾಕ ತಾಯಿ।
ಬಂಕಿ ಕಾಡತಾವ ॥ ೬ ॥

---

# ಉಡಿತುಂಬುವ ಹಾಡು



ಬಾಳೆಯ ಬನ ಚೆಲುವ।
ಬಾಳೆಯ ಗೊನಿ ಚೆಲುವ।
ಬಾಳ್ಯಾಗ ಇರುವ ಗಿಣಿ ಚೆಲುವ। ಸೋಬಾನಮ ॥
ಬಾಳಿಯಾಗ ಇರುವ ಗಿಣಿ ಚೆಲುವ ತಮ್ಮನ
ಬಾಗಲ ಮಾಟ ಕರಚೆಲುವ। ಸೋ.... ॥ ೧ ॥

ನಿಂಬೀಯ ಬನ ಚೆಲುವಽ |
ನಿಂಬೀಯ ಗೊನಿ ಚೆಲುವಽ |
ನಿಂಬ್ಯಾಗ ಇರುವ ಗಿಣಿಽ ಚೆಲುವಽ | ಸೋ॰ ...
ನಿಂಬಿಯಾಗಽ ಇರುವ ಗಿಣಿ ಚೆಲುವ ತಮ್ಮನ
ಕಂಬಽದ ಮಾಟ ಕರಚೆಲುವ | ಸೋ॰ || ೨ ||

ನಿಂಬೀಯ ಬನದಾಗ ಚಂದರನ ಕಾವಲ |
ಬಂದವರ್‍ಯಾರ ಒಳಹೊರಗಽ | ಸೋ॰....
ಬಂದುವವಽರ್‍ಯಾರ ಒಳಹೊರಗ ತಂಗೆವನ
ಅಪ್ಪದವರಲ್ಲ ಪರಮಂದೆ | ಸೋ॰ || ೩ ||

ಬಾಳೀಯ ಬನದಾಗ ಭಾವನ ಕಾವಲ
ಬಂದಽವರ್‍ಯಾರ ಒಳಹೊರಗ | ಸೋ॰ ....
ಬಂದುವವಽರ್‍ಯಾರ ಒಳಹೊರಗ ತಂಗೆವನ
ಅಪ್ಪದವರಲ್ಲ ಪರಮಂದೆ | ಸೋ॰ || ೪ ||

ಅತ್ತಿಕಾಯೀ ತಂದು ಅತ್ತೆ ಉಡಿಯಲಿ ತುಂಬಿ |
ಅತ್ತ್ಯೆದ್ದು ಹರಕಿ ಕುಡತಾಳಽ |ಸೋ॰....
ಅತ್ತೆಽಯೆದ್ದು ಹರಕಿ ಕುಡತಾಳ ತಂಗೆವಗ
ಹತ್ತು ಮಕ್ಕಽಳ ಹಡೆಯೆಂದು | ಸೋ॰ || ೫ ||

ಮಾವಿನ ಕಾಯಿ ತಂದು ಮಾವ ಉಡಿಯಲಿ ತುಂಬಿ |
ಮಾಯಽದ ಮಕ್ಕಳ ಹಡೆಯೆಂದು | ಸೋ॰....
ಮಾಯಽದ ಮಕ್ಕಳ ಹಡೆಯೆಂದು ತಂಗೆವಗ |
ಮಾವ ಬಂದ್ಹರಕಿ ಕೊಡತಾನ | ಸೋ॰ || ೬ ||

ಬಾಳಿಕಾಯೀ ತಂದು ಭಾವ ಉಡಿಯಲಿ ತುಂಬಿ |
ಭಾವ ಎದ್ದು ಹರಕಿ ಕೊಡತಾನ | ಸೋ॰....
ಭಾವ ಎದ್ದು ಹರಕಿ ಕೊಡತಾನ ತಂಗೆವ್ವಾ |
ಭಾಳ ಮಕ್ಕಽಳ ಹಡೆಯವ್ವಾ | ಸೋ॰ || ೭ ||

ಅತ್ತಿಂದ ಬಂದಾವ ಮುತ್ತಿನೆರಡಾರೂತಿ
ಉಪ್ಪರಗಿ ಗಗನ ತುಳುಕೂತ। ಸೋ. ......
ಉಪ್ಪುವರಗಿs ಗಗನ ತುಳುಕೂತ ತಂಗೆವ್ವನ।
ಆತ್ತೆಯಾರೂತಿ ಬೆಳಗ್ಯಾಳ। ಸೋ ॥ ೮ ॥

## ಬೇನೆತಿನ್ನುವ ಹಾಡು

ಹುಟ್ಟಿದಂದಿಂಗಿ ಮೊದಲs ಹೊಟ್ಟೆಬ್ಯಾನೆಂಬೂದರಿಯ।
ಹೊಟ್ಟಿ ಕುಟ್ಟಂದಾವಲ್ಲss
ಎದ್ದಾssವೇಳವ್ವಾ ಬ್ಯಾನಿ ತಾಳಲಾರೇನ ಬ್ಯಾನಿ ॥ ೧ ॥
ನಡ ಟೊಂಕ ಕೊಡಲೀಲಿ ಕಡದಂತ ತಡಬ್ಯಾನಿ।
ಬದಿಲಿ ಕುಂತವ್ವಗಳಿರ್‍ಯಾ ಹಡಿ ಹsಡೀ ಅಂದಾರಲ್ಲ।
ಎದ್ದಾssವೇ.. . . . ॥ ೨ ॥
ಹೊತ್ತ ಹೊತ್ತೀನ ಬ್ಯಾನಿ ಕತ್ತೀಲಿ ಕಡದಂಗ।
ಹೆತ್ತವ್ವ ಬಾರ ಬದಿಯಲ್ಲಿ।
ಎದ್ದಾssವೇ........ ॥ ೩ ॥
ತಾಸ ತಾಸೀನ ಬ್ಯಾನಿ ತಾಳ ಬಾರಿಸಿದಂಗ।
ತಾಯವ್ವ ಬಾರ ಬದಿಯಲ್ಲಿ।
ಎದ್ದಾssವೇ.... ... ॥ ೪ ॥
ಅಡಗೀಯ ಮನಿಯಾಗ ಕಡಗ ಕಾಲೀನ ಮಂಚ।
ಬದಿಲಿ ಕುಂತವ್ವಗಳಿರ್‍ಯಾ ಹಡಿ ಹsಡೀ ಅಂದಾರಲ್ಲ।
ಎದ್ದಾssವೇ....... ॥ ೫ ॥
ಥರಥರ ನಡಗೂತ ತೊಡಿಗೊಳು ಆದರೂತ।
ತುರುಬಿನ ಕೂದsಲ ಬಾಯೊಳಗಿಡವೂತ।
ಎದ್ದಾssವೇ....... ॥ ೬ ॥

ಒಡಿಗಾಯಿ ಹಿಡಿಗಾಯಿ ಒಡೆಯ ತೆಂಗಿನ ಕಾಯಿ |
ಒಡೆಯ ಪರವೂತಮಲ್ಲ ಕಡಿಗಾದರು ಮಾಡ್ಯಾನಲ್ಲ |
ಎದ್ದಾಽಽವೇ ...... || ೭ ||

---

## ತೊಟ್ಟಿಲಲ್ಲಿ ಹಾಕುವ ಹಾಡು

ಶಿಂದಿಂಗಿ ತಳದಳದಲ್ಲಿ ಸಂಗಮ್ಮನ ತಳ |
ಶಂಭೋ ಮಹದೇವ ಇಂದುದಯನಾಗೊ | ಜೋ ಜೋ ||

ಭಂಗಾರ ತೊಟ್ಟಿಲ ಥೊರಿತಾಯಿ ! ಕುಂದಲ |
ಸಿಂಗರದಾನ ಶ್ರೀಕೃಷ್ಣಗ ಛಂದಾಗಿ ತೂಗಾರಿ | ಜೋ.... ||

ಕರೆದು ಬಂದೆವು ಓಣಿ ನೆರೆದು ಬಂದಿತು ಮಂದಿ |
ಬಂದು ನಿಂತಾರವ್ವ ಕನ್ನಿ ಮುತ್ತೈದ್ಯಾರು | ಜೋ.... ||

ಸಕ್ಕರಿ ಪಾಯಸ ಬಸಿದು ಬಟ್ಟಲ ತುಂಬಿ |
ತುತಮಾಡಿ ಉಣಿಸಿದರ ಬಿಕಿಬಿಕಿ ಅಳತಾನ | ಜೋ.... ||

ಸಾದ ಸಿರಿಗಂಧ ತಯದು ಬಟ್ಟಲ ತುಂಬಿ |
ತೀಡಿ ತೀಡಿ ಹಚ್ಚಿದರ ಕಾಡಿ ಕಾಡಿ ಅಳತಾನ | ಜೋ... ||

ನಾಗಬಂದೀಸಂಗಿ ನಡುವಿನ ವ್ಯಾಲ ತೊಡಸಿ |
ಆಡ್ಲಕ್ಕ ಹೋಗಂದ್ರ ಬೋರ್ಯಾಡಿ ಅಳತಾನ | ಜೋ.... ||

ಬಿಂದೂಲಿ ಇಡಸೀದ ಬಿಳಿಯಂಗಿ ತೊಡಸೀದ |
ಆಡಿ ಬಾ ಕಂದಂದ್ರ ಕಾಡಿ ಕಾಡಿ ಅಳತಾನ | ಜೋ.... ||

ನೀರಾಗ ನೆಳ ನೋಡಿ ಸೂರ್ಯ ಚಂದ್ರನ ಬೇಡಿ |
ಅದರಂಗ ತಾ ಬೇಡಿ ಬೋರ್ಯಾಡಿ ಅಳತಾನ | ಜೋ.... ||

ಪಳಿಮ್ಮಿ ನೊರೆಹಾಲ ತೊಟ್ಟಿಲದಾಗಿಟ್ಟೇದ |
ಆಡಿ ಬಂದ್ಕುಡಿಯಂದ್ರ ಕಾಡಿಕಾಡ್ಯಳತಾನ | ಜೋ.... ||

---

# ಅತ್ತೆಸೊಸೆಯರ ಜಗಳ



ಅತ್ತಿ ಸಸ್ತೆರ ಜಗಳಾ ಹತ್ತು ವರುಷವು ಆಗಿ।
ಬಿಚ್ಚಿ ಹೇಳ್ಯಾಳ ಮಾತ ತನ್ನ ಮಗನ ಮುಂದ। ಸೂಯಿ ॥ ೧ ॥

ಬಿಚ್ಚೀನೆ ಹೇಳ್ಯಾಳ ಮಗನ ಮುಂದ ಈವ ಮಾತಾ।
ಬಿಟ್ಟುಬಿಡೊ ಮಗನೆ ನಿನ್ನ ಮಡದೀನ। ಸೂಯಿ ॥ ೨ ॥

ಬಿಟ್ಟ್ಯಾರ ಬಿಡಲಾಕ ಕಟ್ಟಿದ್ದ ಗಂಟಲ್ಲ।
ಹತ್ತು ಮಂದಿ ರೈತರು ಕೂಡಿ ಹಾಕೀದ ಗಂಟು। ಸೂಯಿ ॥ ೩ ॥

*　*　*　*

ದೇವರ ಮನಿಯಾನ ಮಜ್ಜೀಗಿ ಮಾಡತ್ತೆವ್ವಾ।
ನಾ ಹೋಗಿ ಬರತ ನನ್ನ ತವರೀಗೆ। ಸೂಯಿ ॥ ೪ ॥

ಹ್ವಾದರ ಬಗ್ಗೀವ ಏನ ಇದ್ದರ ಬಗ್ಗೀವ ಏನ।
ಹೋಗಿ ನಿನ್ಹಾಲಿ ನೀನು ಹರಿಕೊಳ್ಳ। ಸೂಯಿ ॥ ೫ ॥

ಮಂಚದ ಮ್ಯಾಲ ಕುಂತು ಎಲಿ ತಿನ್ನು ಮಾವಯ್ಯ।
ನಾ ಹೋಗಿ ಬರತ ನನ್ನ ತವರೀಗೆ। ಸೂಯಿ ॥ ೬ ॥

ಹ್ವಾದರ ಹೋಗವ್ವಾ ಜತ್ತನ್ಲೆ ಬಾರವ್ವಾ।
ತವರೊಳ್ಳೆವರಂತ ನೀನು ತಡೀಬ್ಯಾಡಾ। ಸೂಯಿ ॥ ೭ ॥

ಹಿಂಡ ಮುಂದ್ಯಾಗ ನಿಂತು ಚಂಡಾಡು ಭಾವಯ್ಯಾ।
ನಾ ಹೋಗಿ ಬರತ ನನ್ನ ತವರೀಗೆ। ಸೂಯಿ ॥ ೮ ॥

ಹ್ವಾದರ ಹೋಗವ್ವಾ ಜತ್ತನ್ಲೆ ಬಾರವ್ವಾ।
ತವರೊಳ್ಳೆವರಂತ ನೀನು ತಡೀಬ್ಯಾಡ। ಸೂಯಿ ॥ ೯ ॥

ಹಾದೀ ಹೊಲದವನ ಹಾಲಂತ ಗುಣದವನ ।
ಹಾಡ್ಯಾಡಿ ಹಕ್ಕಿ ನೀನು ಹೊಡಿಯವನ । ಸೂಯಿ ॥ ೧೦ ॥

ಹಾಡೀಹಾಡೀ ಹಕ್ಕಿ ಹೊಡಿವಂಥ ಮನಿ ಪುರುಷ ।
ನಾ ಹೋಗಿ ಬರತ ನನ್ನ ತವರಿಂಗೆ । ಸೂಯಿ ॥ ೧೧ ॥

* * * *

ಹೊರಿಹುಲ್ಲ ತಂದಾನ ಧಪ್ಪಂತ ಒಗದಾನ ।
ಚಂದರ ಸಾಲ್ಯಾಗ ಇಲ್ಲ ಮನಿ ಮಡದಿ । ಸೂಯಿ ॥ ೧೨ ॥

ತುಪ್ಪಬಾನುಣ ಮಗನ ಮೇಲುಪ್ರಿ ಏರ ಮಗನ ।
ಮಡದೆಂಬು ಶಬುದ ನೀನು ಮರಿ ಮಗನ । ಸೂಯಿ ॥ ೧೩ ॥

ತುಪ್ಪಾ ಬಾನಾ ಒಯ್ದು ತಿಪ್ಪೀಗಿ ಸುರುವವ್ವಾ ।
ತುಪ್ಪಿನಂಥಕ್ಕಿ ನನ್ನ ಮನೀ ಮಡದಿ । ಸೂಯಿ ॥ ೧೪ ॥

ತುಪ್ಪೀನ ಅಂಥಕಿ ಮನಿ ಮಡದಿನ ಬಿಟಕೊಟ್ಟು ।
ತಿಪ್ಪಿ ಸೋಬೂತಿ ನನ್ನ ಮಾಡಿದಿ ತಾಯಿ । ಸೂಯಿ ॥ ೧೫ ॥

ಹಾಲಾ ಬಾನುಣು ಮಗನೆ ಮೇಲುಪ್ರಿಗೇರು ಮಗನೆ ।
ಮಡದೆಂಬು ಶಬದ ನೀನು ಮರಿ ಮಗನೆ । ಸೂಯಿ ॥ ೧೬ ॥

ಹಾಲಾ ಬಾನಾ ಒಯ್ದು ಹಾದೀಗಿ ಸುರವವ್ವಾ ।
ಹಾಲಿನಂಥಕ್ಕಿ ನನ್ನ ಮನೀ ಮಡದಿ । ಸೂಯಿ ॥ ೧೭ ॥

ಹಾಲಿನಂಥಕ್ಕಿ ಮನಿ ಮಡದಿನ ಬಿಟಕೊಟ್ಟು ।
ಹಾದಿ ಸೋಬೂತಿ ನನ್ನ ಮಾಡೀದಿ ತಾಯಿ । ಸೂಯಿ ॥ ೧೮ ॥

## " ಶಾಂವಕ್ಕಿ ಕುಟ್ಟಂದ್ರ "

ಶಾಂವಕ್ಕಿ ಕುಟ್ಟಂದ್ರ ಶರಗ್ಯಾಸಿ ಮೆಲಗ್ಯಾಳ ।
ಎಬಸಣ್ಣ ನಿನ್ನ ಮಡದೀನ । ಸೂವಯ್ಯಾ ॥ ೧ ॥

ಪಡದೀನ ಎಬಸಿದರ ಅರನಿದ್ದಿನಾದಾವ |
ಎರಡೊಬ್ಬಿ ಮಾಡಿ ಥಳಸವ್ವಾ | ಸೂವಯ್ಯಾ ||೨||

ಎರಡೋಽಬ್ಬಿ ಮಾಡಿದರ ಕರಡಕ್ಕಿನಾದಾವ |
ಕರಡಕ್ಕಿ ಜ್ವಾಳ ಸುರಿಯುಽವ | ಸೂವಯ್ಯಾ ||೩||

ಕುಟ್ಟಿದರ ಕುಟ್ಟವ್ವಾ ಕಿಟಕೀಟಿ ಹಚಬ್ಯಾಡಾ |
ಬಂದ್ಹಾದಿ ಓಡಿದು ನಡಿ ತಂಗೀ | ಸೂವಯ್ಯಾ ||೪||

ಎತ್ತಾರೆ ತಾರಣ್ಣಾ ಮುಟ್ಟಾರೆ ಬಿಗಿಯಣ್ಣಾ |
ಹೊಂತೂಟ್ಲಿ ನನ್ನ ಖಳವಣ್ಣಾ | ಸೂವಯ್ಯಾ ||೫||

ಎತ್ತ್ಯಽ ನಮ್ಮಲ್ಲಿಲ್ಲ ಮುಟ್ಟ್ಯಽ ನಮ್ಮಲ್ಲಿಲ್ಲ |
ಬಂದಽ ದಾರಿ ಹಿಡಿದು ನಡಿ ತಂಗಿಽ | ಸೂವಯ್ಯಾ ||೬||

ತಂಗಿ ಹ್ವಾದ ಮರದೀನ ರಂಬೀಗಿ ಬ್ಯಾನಿ ಬಂದು |
ಮನಿಯಾನ ಮಕ್ಕಳಿಗಿ ಉರಿ ಥೇಳಿಯುಽ | ಸೂವಯ್ಯಾ ||೭||

ಮನಿಯಾನ ಮಕ್ಕಳಿಗಿ ಉರಿ ಥೇಳೀ ಬಂದರ |
ದೇವಽರ ಕೇಳಾಕ ನಡದಾನಽ | ಸೂವಯ್ಯಾ ||೮||

ಕೇಳೂಸಿ ನೋಡಿದರ ದೇವರಿಲ್ಲ ದಿಂಡರಿಲ್ಲ |
ಮನಿಯಾನ ಹೆಣಮಗಳು ಉಸರಂದ | ಸೂವಯ್ಯಾ ||೯||

ಎತ್ತಾರೆ ತಗೊಂಡಾನಽ ಮುಟ್ಟಾರೆ ಬಿಗದಾನ |
ತಂಗ್ಹ್ವಾದ ದಾರಿ ಹಿಡಿದಾಽನ ಸೂವಯ್ಯಾ ||೧೦||

ಎಂದಿಲ್ಲದಣ್ಣಯ್ಯಾ ಇಂದ್ಯಾಕ ಬಂದಾನ |
ಕುಂಡಽರ ಕೊಡರೆ ಮಣಿ ಚವಕಿ | ಸೂವಯ್ಯಾ ||೧೧||

ಕುಂಡಽರ ಬಂದಿಲ್ಲ ನಿಂದಽರ ಬಂದಿಲ್ಲ |
ಬರಬೇಕ ತಂಗಿ ಮದುವೀಗಿ | ಸೂವಯ್ಯಾ ||೧೨||

ಮಜ್ಜಿಗಿ ಮಾಡವರಿಲ್ಲ ಬೆಣ್ಣಿ ತೆಗೆಯುವರಿಲ್ಲ |
ಹ್ಯಾಂಗ ಬರಲೆಣ್ಣಾ ಮದವೀಗಿ | ಸೂವಯ್ಯಾ ||೧೩||

ಮಜ್ಜಿಗಿ ಮಾಡವರ ಕುಡತ ಬೆಣ್ಣಿ ತೆಗೆವರ ಕುಡತ |
ಬರಬೇಕ ತಂಗಿ ಮದವೀಗಿ | ಸೂವಯ್ಯಾ ||೧೪||

ಬ್ಯಾಸೀಗಿ ಬಿಸಲಣ್ಣಾ ಕೂಸೀನ ತಾಯಣ್ಣಾ |
ಹ್ಯಾಂಗ ಬರಲೆಣ್ಣಾ ಮದವೀಗಿ | ಸೂವಯ್ಯಾ ||೧೫||

ನಿನಗ ಪಲ್ಲಕಿ ಕುಡತ ಕೂಸಿಗಿ ಮೇಣೇ ಕುಡತ |
ಗಂಡಗ ಕುಡತ ಮರಿಗುದರಿ | ಸೂವಯ್ಯಾ ||೧೬||

ಬಂದರ ಬರುವೇನೋ ಬಾಗಿಲ್ದಾಗ ನಿಂತೇನೊ |
ಬಾಲಾಗ ಧಾರಿ ಎರೆದೇನೋ | ಸೂವಯ್ಯಾ * ||೧೭||

ಹತ್ತ ರೂಪಾಯಿ ಕೊಟ್ಟು ಸೀರೀಯ ತರಸೀದ |
ಉಟ್ಕೋಗ ತಂಗಿ ಜನದಾಗ | ಸೂವಯ್ಯಾ ||೧೮||

ಇವು ಸೀರಿ ಒಯ್ದು ಮಡದೀಗಿ ಉಡಸಣ್ಣಾ |
ಹಾಡ್ಯಾಳೊ ನಿನ್ನ ಹರಸ್ಯಾಳೋ | ಸೂವಯ್ಯಾ ||೧೯||

ಹಾಡಿಯಾಳೊ ನಿನ್ನ ಹರಸ್ಯಾಳೊ ನಾಲುರದಾಗ |
ಬಾ ಅಣ್ಣನೆಂದು ಕರದಾಳೋ | ಸೂವಯ್ಯಾ ||೨೦||

ಕಲ್ಲಬುರಗಿಗಿ ಹೋಗಿ ಕುಬ್ಬಸ ತಂದೀದ |
ತೊಟಗೋ ಬಾ ತಂಗಿ ಜನದಾಗ | ಸೂವಯ್ಯಾ ||೨೧||

ಅವು ಕುಬ್ಬಸನೊಯ್ದು ಮಡದೀಗಿ ತೊಡಿಸಣ್ಣಾ |
ಹಾಡ್ಯಾಳೊ ನಿನ್ನ ಹರಸ್ಯಾಳೋ | ಸೂವಯ್ಯಾ ||೨೨||

ಹಾಡಿಯಾಳ ನಿನ್ನ ಹರಸ್ಯಾಳ ನಾಲುರದಾಗ |
ಬಾರಣ್ಣನೆಂದು ಕರದಾಳ | ಸೂವಯ್ಯಾ ||೨೩||

ಪಂಡ್ರಾಪೂರಕ್ಹೋಗಿ ಕೂಕಮ ತಂದೀದ |
ಹಚಗೊ ಬಾ ತಂಗಿ ಸಬೆದಾಽಗಽ | ಸೂವಯ್ಯಾ ॥ ೨೪ ॥

ಆಽವು ಕೂಕಮನೊಯ್ದು ಮಡದೀಗಿ ಹಚ್ಚ್ಯಣ್ಣಾ |
ಹಾಡ್ಯಾಳೊ ನಿನ್ನ ಹರಸ್ಯಾಳೋ | ಸೂವಯ್ಯಾ ॥ ೨೫ ॥

ಹಾಡಿಯಾಽಳಽ ನಿನ್ನ ಹರಸ್ಯಾಳ ನಾಲುರದಾಗ |
ಬಾರಣ್ಣನೆಂದು ಕರದಾಳಽ | ಸೂವಯ್ಯಾ ॥ ೨೬ ॥

ನನ್ನಲ್ಲಿ ಹುಟ್ಟೀದಿ ನನ್ನಲ್ಲಿ ಬೆಳದೀದಿ |
ಇಟ್ಟ ಮಾತೆಲ್ಲಿ ಕಲತೆವ್ವಾಽ | ಸೂವಯ್ಯಾ ॥ ೨೭ ॥

ಅಡವ್ಯಾಗ ಹುಟ್ಟೀದ ಅಡವ್ಯಾಗ ಬೆಳದೀದ |
ಎಲಿಗೊಂದ ಮಾತ ಕಲತೀನಽ | ಸೂವಯ್ಯಾ ॥ ೨೮ ॥

ಹುಟ್ಟಿದ ಮಲ್ಲಿಗಿಗೀಡ ಹುಟ್ಟಿದಂಗ ಇರುದಿಲ್ಲ |
ದಿನಕೊಂದು ಪರಿಯ ಚಿಗವೂದಽ | ಸೂವಯ್ಯಾ ॥ ೨೯ ॥

ದಿನಽಕೊಂದು ಪರಿಯ ಚಿಗವೂ ಮಲ್ಲಿಗಿ ಹೂವ |
ಮತ್ತೊಬ್ಬ ಜಾಣ ಮುಡಿಯೋದಽ | ಸೂವಯ್ಯಾ ॥ ೩೦ ॥

# ನೂಲೊಲ್ಲ್ಯಾಕ ಚೆನ್ನೀ ?



ಗಂಡ:— ಸೂಲಲ್ಯಾಕ ಚೆನ್ನೀ!
ನೂಲಲ್ಯಾಕ ಚೆನ್ನೀ!

ಹೆಂಡತಿ:— ರಾಟಲಿಲ್ಲೋ ಜಾಣಾ!
ರಾಟಲಿಲ್ಲೋ ಜಾಣಾ!

ಕತೆಗಾರ.— ಮನಿಯಾನ ಬಂಡೀ ಮುರಿಸಿ
ಮನಿಯಾನ ಬಂಡೀ ಮುರಿಸಿ
ರಾಟೀ ಮಾಡಿಸಿ ಕೊಟ್ಟಾ
ರಾಟೀ ಮಾಡಿಸಿ ಕೊಟ್ಟಾ

ಗಂಡ:— ಸೂಲಲ್ಯಾಕ ಚೆನ್ನೀ!
ಸೂಲಲ್ಯಾಕ ಚೆನ್ನೀ!

ಹೆಂಡತಿ:— ಕದರಿಲ್ಲೊ ಜಾಣಾ!
ಕದರಿಲ್ಲೊ ಜಾಣಾ!

ಕತೆಗಾರ:— ಕೈಯಾನ ಗುದ್ದಲಿ ಮುರಿಸಿ
ಕೈಯಾನ ಗುದ್ದಲಿ ಮುರಿಸಿ
ಕದರ ಮಾಡಿಸಿಕೊಟ್ಟಾ
ಕದರ ಮಾಡಿಸಿಕೊಟ್ಟಾ

ಗಂಡ.— ನೂಲಲ್ಯಾಕ ಚೆನ್ನೀ!
ಸೂಲಲ್ಯಾಕ ಚೆನ್ನೀ!

ಹೆಂಡತಿ:— ಚಿಲ್ಲಿಲ್ಲೊ ಜಾಣಾ!
ಚಿಲ್ಲಿಲ್ಲೊ ಜಾಣಾ!

ಕತೆಗಾರ:— ಮನಿಯಾನ ಕೋಣವು ಕಡಿಸಿ
ಮನಿಯಾನ ಕೋಣವು ಕಡಿಸಿ
ಚಿಲ್ಲು ಮಾಡಿಸಿಕೊಟ್ವಾ
ಚಿಲ್ಲು ಮಾಡಿಸಿಕೊಟ್ವಾ

ಗಂಡ:— ನೂಲಲ್ಯಾಕ ಚೆನ್ನೀ !
ನೂಲಲ್ಯಾಕ ಚೆನ್ನೀ !

ಹೆಂಡತಿ:— ಹಮ್ಮಿಗಿಲ್ಲಲೊ ಜಾಣಾ !
ಹಮ್ಮಿಗಿಲ್ಲಲೊ ಜಾಣಾ !

ಕತೆಗಾರ:— ನಡುವಿನ ಉಡದಾರ ಕಡಿದು
ನಡುವಿನ ಉಡದಾರ ಕಡಿದು
ಹಮ್ಮಿಗಿ ಮಾಡಿಸಿಕೊಟ್ವಾ
ಹಮ್ಮಿಗಿ ಮಾಡಿಸಿಕೊಟ್ವಾ

ಗಂಡ:— ನೂಲಲ್ಯಾಕ ಚೆನ್ನೀ !
ನೂಲಲ್ಯಾಕ ಚೆನ್ನೀ !

ಹೆಂಡತಿ:— ಕಟ್ಟಿ ಇಲ್ಲಲೋ ಜಾಣಾ
ಕಟ್ಟಿ ಇಲ್ಲಲೋ ಜಾಣಾ

ಕತೆಗಾರ:— ಊರಾನ ವಡ್ಡರ ಕರಿಸಿ
ಊರಾನ ವಡ್ಡರ ಕರಿಸಿ
ಕಟ್ಟಿ ಕಟ್ಟಿಸಿಕೊಟ್ವಾ
ಕಟ್ಟಿ ಕಟ್ಟಿಸಿಕೊಟ್ವಾ

ಗಂಡ:— ನೂಲಲ್ಯಾಕ ಚೆನ್ನೀ !
ನೂಲಲ್ಯಾಕ ಚೆನ್ನೀ !

ಹೆಂಡತಿ:— ಗೆಳತ್ಯಾರಿಲ್ಲೊ ಜಾಣಾ !
ಗೆಳತ್ಯಾರಿಲ್ಲೊ ಜಾಣಾ !

ಕತೆಗಾರ:— ಓಣ್ಯಾಗಿನವರ ಕರಸಿ
ಓಣ್ಯಾಗಿನವರ ಕರಸಿ
ಗೆಳತ್ಯಾರ ಕೂಡಿಸಿಕೊಟ್ಟಾ
ಗೆಳತ್ಯಾರ ಕೂಡಿಸಿಕೊಟ್ಟಾ

ಗಂಡ:— ನೂಲಲ್ಯಾಕ ಚೆನ್ನೀ!
ನೂಲಲ್ಯಾಕ ಚೆನ್ನೀ!

ಹೆಂಡತಿ:— ಗುಗ್ಗರಿಲ್ಲೊ ಜಾಣಾ!
ಗುಗ್ಗರಿಲ್ಲೊ ಜಾಣಾ!

ಕತೆಗಾರ.— ಗೋದಿ ಕಡ್ಲಿ ತರಸಿ
ಗೋದಿ ಕಡ್ಲಿ ತರಸಿ
ಗುಗ್ಗರಿ ಹಾಕಿಸಿಕೊಟ್ಟಾ
ಗುಗ್ಗರಿ ಹಾಕಿಸಿಕೊಟ್ಟಾ

ಗಂಡ:— ನೂಲಲ್ಯಾಕ ಚೆನ್ನೀ!
ನೂಲಲ್ಯಾಕ ಚೆನ್ನೀ!

ಹೆಂಡತಿ.— ನನಗ ಬರೂದಿಲ್ಲೋ ಜಾಣಾ!
ನನಗ ಬರೂದಿಲ್ಲೋ ಜಾಣಾ!

---

## ಕಿವುಡರ ಹಾಡು

ಬುತ್ತಿ [illegible]್ಯಾಲ ಬುತ್ತೀ ಬುತ್ತಿ ಒಯ್ಯು ಜಾಣೆ |
ನಮ ಗಂಗನಳ್ಳಿ ಹಾದ್ಯೋಂದ್ಯಾಪ ಕಡಿಗಾದ | ಕೋಲೆಣ್ಣಾ
ಕೋಲ ||೧||

ನಮ್ಮತ್ತಿ ಕಟ್ಟ್ಯಾಳ ಒಂದು ಅರದ ರೊಟ್ಟಿ ।
ಹಾದ್ಯಾಗ ನಾ ಎಲ್ಲಿ ಬಿಚ್ಚಿಕೊಡಲೆಪ್ಪಾ । ಕೋ॰ ॥ ೨ ॥

ನಿನ್ನ ರೊಟ್ಟಿ ನಿನಗಿರಲಿ ನಿನ್ನ ಬುತ್ತಿ ನಿನಗಿರಲಿ ।
ನಮ ಗಂಗನಳ್ಳಿ ಹಾದ್ಯೊಂದ್ಯಾವ್ರ ಕಡಿಗಾದ । ಕೋ॰ ॥ ೩ ॥

ಏ ಗಂಡಾ ಏ ಪುರುಷಾ ಹಾದ್ಯಾಗ ನನಗೊಬ್ಬ ।
ರೊಟ್ಟಿ ಬೇಡುತಿದ್ದಾ । ಕೋ॰ ॥ ೪ ॥

ಏ ಭಾರ್ಗಿ ಏ ಮೂಳಾ ನಾಕು ಮೂಲಿ ಬೆಳಿಯಲಿ ।
ಕಿಂವ್ಯಾಗ್ವಾಲಿ ಬುಗುಡಿ ಮಾಡಸೇನಂದಾ । ಕೋ॰ ॥ ೫ ॥

ಏ ಅತ್ತಿ ಏ ಮಾವಾ ಹೊಲದಾಗ ನನ ಗಂಡಾ ।
ಮಲಿಯಾರಿ ಮೂಗಾರಿ ಕೊಯ್ದೇನಂದಾ । ಕೋ॰ ॥ ೬ ॥

ಒಳಗೀನಕ್ಕಿಂತಾ ಆದಾಳ್ದ್ಯಾದಾಸಳಂದ ನೆರಮನಿ ।
ಕುಂಬಾರ್ಗ ನನಗ ಹಾದರಿಟ್ಯಾsಳ । ಕೋ॰ ॥ ೭ ॥

ಅವ್ವಾಣಿ ಅಪ್ಪಾಣಿ ದೇವರಾಣಿ ದಿಂಡರಾಣಿ ।
ತೊಗರೀಯ ಗುಗ್ಗರಿ ತಿಂದಿಲ್ಲ ಅತ್ತಿ । ಕೋ॰ ॥ ೮ ॥

— — —

# ಜೀನನ ಹಾಡು

ಇಂದs ಎಳ್ಳ್ಯಮಾಸಿ ಬಂತಲ್ಲ ಜೀನಾ ॥
ಅದ್ದsನ ಬೀಸs ಗಿದ್ದsನ ಕುಟ್ಟಿ ।
ಕುಳ್ಳ್ಯಾಗ ಅಡುವ ಕೋಲೀಲಿ ಮುಗಚ ॥
ಎಲ್ಲಾರ ಛರಗಾ ಹೊಂಟಿತಲ್ಲೊ ಜೀನಾ ।
ನಮ್ಮ ದ್ಯಾವರ ಛರಗಾ ಹೊಂಡಬೇಕೊ ಜೀನಾ ॥

ಅವರೆಲ್ಲಾ ಹಿಂದಽ ನಾವೆಲ್ಲಾ ಹಿಂದಽ ||
ಅಂಟಽದ ತೆಳಗ ಇಟ್ಟಾನೊ ಜೀನಾ |
ಅಂಟಽಕ ತೆಲಿಕೊಟ್ಟು ಮಲಗ್ಯಾನೊ ಜೀನಾ ||

ಮುಕ್ಕ ಮಗಿ ನೀರಾ ಕಾಗಿ ಕುಡಿತಲ್ಲ |
ಕುಳ್ಳ್ಯಾಗಿನ ಸುಚ್ಚ ಹದ್ದ ಒಯಿತಲ್ಲ |
ಇನ್ನ್ಯಾನ ಉಳ್ಳೀ ಇನ್ನ್ಯಾನ ತಿಲ್ಲೀ ||

* * * *

ಉದ ಉದ ಅಂತ ಹೋಗಿ ನಿಂತಾ‘ಳಿಲ್ಲ’ |
ಉವ ಉದ ಅಂದರ ನೀಡಾಽಣಿಲ್ಲ ||

ಓಡ್ಯಾಡಿ ಪುಂಡಿ ಕಟಗಿ ಕಿತ್ತ್ಯಾನೊ ಜೀನಾ |
ಎಲ್ಲವನ ಬೆನ್ನ ಬೆನ್ನ ಶಳದಾನೊ ಜೀನಾ ||

ಹೊಡಿಬ್ಯಾಡೊ ಜೀನಾ ಹೊಡಿಬ್ಯಾಡೊ ಜೀನಾ |
ಬಂದ ಹಾದೀ ಕೂಡಿ ಹೋಗತೇನೊ ಜೀನಾ ||

ಜ್ವಾಳಽದ ಹೊಲಕ ಹೋಗ್ಯಾಳ ಎಲ್ಲ |
ಕಣ್ಣಾಸ ಕಾಡೀಗಿ ಉದರ್ಸ್ಯಾಳಿಲ್ಲ ||
ಹತ್ತಿಯ ಹೊಲಕ ಹೋದಾಳಿಲ್ಲಾ |
ಕೈಮ್ಯಾಲಿನ ಗಂಧಾ ಉದರ್ಸ್ಯಾಳಿಲ್ಲಾ ||
ಗೋದೀಯ ಹೊಲಕ ಹೋದಾಳಿಲ್ಲಾ |
ಉಡಿಯಾನ ಭಂಡಾರ ಉವರ್ಸ್ಯಾಳಿಲ್ಲಾ ||
ಕಡ್ಲೀಯ ಹೊಲಕ ಹೋದಾಳಿಲ್ಲಾ |
ಹಣಿಮ್ಯಾಲಿಸ ಕೂಕಮ್ಮ ಉದರ್ಸ್ಯಾಳಿಲ್ಲಾ ||

* * * *

ಜ್ವಾಳಽದ ಹೊಲಕ ಹ್ವಾದಾಽನೊ ಜೀನಾ |
ಹತ್ತ್ ಖಂಡಗ ಜ್ವಾಳಿಲ್ಲಾ ಬತ್ತಗಾಡೀಗಿ ||

ಹತ್ತೀಯ ಹೊಲಕ ಹ್ವಾದಾsನೊ ಜೀನಾ ।
ಹತ್ತ್ ಖಂಡಗ ಹತ್ತೆಲ್ಲಾ ಬಂಜಿಯಾಯೀತಲ್ಲಾ ॥

ಗೋದೀಯ ಹೊಲಕ ಹ್ವಾದಾsನೊ ಜೀನಾ ।
ಹತ್ತ್ ಖಂಡ್ಗ ಗೋದೆಲ್ಲಾ ಜೊಳ್ಳಹಾಯಿತಲ್ಲ ॥

ಕಡ್ಲೀಯ ಹೊಲಕ ಹ್ವಾದಾsನೊ ಜೀನಾ ।
ಹತ್ತ್ ಖಂಡಗ್ಕಡ್ಲೆಲ್ಲಾ ಕೊಳ್ಳಿಹಾಯಿತಲ್ಲ ॥

* * * *

ಕಂಬ್ಳೀಯ ಮುಸಕಾ ಹೊಡದಾನೊ ಜೀನಾ ।
ಜಗಲೀಗಿ ತಲಿಕೊಟ್ಟು ಮಲಗ್ಯಾನೊ ಜೀನಾ ॥

ಉಣ್ಣೇಳೊ ಜೀನಾ ತಿನ್ನೇಳೊ ಜೀನಾ ।
ಇನ್ನೇನ ಉಳ್ಳೀ ಇನ್ನೇನ ತಿಲ್ಲೆ ॥

ಹತ್ತ್ ಖಂಡಗ ಜ್ವಾಳೆಲ್ಲಾ ಬತ್ತ್ ಗಾಡೀಗೆ ।
ಹತ್ತ್ ಖಂಡಗ ಹತ್ತೆಲ್ಲಾ ಬಂಜಿಯಾಯೀತಲ್ಲ ॥

ಹತ್ತ್ ಖಂಡಗ ಗೋದೆಲ್ಲಾ ಸೊಳ್ಳಹಾಯಿತಲ್ಲ ।
ಹತ್ತ್ ಖಂಡಗ ಕಡ್ಲೆಲ್ಲಾ ಕೊಳ್ಳಹಾಯ್ತಲ್ಲ ॥



# ಮಂಗ್ಯಾನ ಹಾಡು

ಹುಬ್ಬಳ್ಳಿ ಶಾರ್‍ದೋಳು ಮಂಗ್ಯಾ ಬಾಜಾರದೊಳು ।
ಮಾಡಿದ್ದ ಆಟವ ನೋಡಿದ್ದೇನ
ಅಂಜಿ ಅಡ್ರಾಸಿ ಮುಂದಕ ಹೋಗಿದ್ದೇನ
ಹಂತಿಲಿದ್ದ ಮಂದೀನೆಲ್ಲ ದೂಡಿದ್ದೆನs ತಂಗಿ
ಛಪ್ಪರದಾಸ ಸಪ್ಪಳ ಕೇಳಿ ಛರ್‍ರನೆ ಓಡಿ ಬಂದು

ಚರ್‍ಸನೆ ಹರದಿತ್ತ ಛೆಂದಗೇಡಿ ಮಂಗ್ಯಾ। ಮಲ್ಲೀಗೆ
ದುಂಡಮಲ್ಲಿಗೆ ॥ ೧ ॥

ಅಂಗೂಡಿ ನ್ಯಾಸಳೀಗಿ ಅಳತಿಲ್ದೆ ಕೆಡಸಿತ್ತ
ರೊಕ್ಕಸದ ಚೀಲೊಂದಮುಚಿತ್ತವ್ವಾ
ತೆಕ್ಕಮಿಕ್ಕಿಲಿಡಬಲ ನೋಡಿದ್ದೆವ
ಗಂಡಗ ಲೆಕ್ಕವು ಏನಂತ ಹೇಳಲೆವ್ವಾ ತಂಗಿ
ಮುಕ್ಕಸವ ಮಾಡೂತ ಸನಿಯಾಕ ಹ್ವಾದಸರ
ಚಿಕ್ಕಂದನಾಡೀತ ಛೆಂದಗೇಡಿ ಮಂಗ್ಯಾ। ಮಲ್ಲೀಗೆ.... ॥ ೨ ॥

ಅಕ್ಕೀಯ ಅಂಗಡ್ಯೊಂದು ಅಳವ ಮಾಡಿತ್ತವ್ವ
ಬಾಳಿ ಹಣ್ಣಿಗಿ ಬಾಯಿ ಹಾಕಿತ್ತವ್ವಾ
ಮಾವೀನ ಹಣ್ಣೊಂದು ಅಮುಚಿತ್ತವ್ವಾ
ಕಡ್ಲಿ ಕರದಂಟ ಕೈಯಾಗ ಹಿಡಿದಿತ್ತವ್ವಾ
ಅದು ಎಂಥ ಮಿಕ ನೋಡ ಇದು ಎಂಥ ಸುಖ ನೋಡ।
ಹುಬ್ಬಳ್ಳಿ ಶಾರಾ ಮಾಡ್ಯಾವ ಹಾಳಾ। ಮಲ್ಲೀಗೆ.... ॥ ೩ ॥

ಸಣ್ಣಾಸ ಹುಡಗರ ಕೈಯಾಗ ಬೆಣ್ಣೀ ರೊಟ್ಟಿ ಕೊಟ್ಟು
ಅಪ್ಪಾ ಅಣ್ಣಾನಂದು ಖಳವಿದ್ದೆವ
ರಾಮಣಗ ಮೀಸಲ ಹಿಡಿದಿದ್ದೆವ
ಬೆಣ್ಣಿ ರೊಟ್ಟಿ ಕಣ್ಣಿಲಿ ಕಂಡು ಕಸಗೊಂಡು ಓಡ್ಹೋಗಿ
ಮರನೇರಿ ನಿಂತಾವ ಮಾನ್ಗೇಡಿ ಮಂಗ್ಯಾ।
ಮಲ್ಲೀಗೆ.... ॥ ೪ ॥

ಅಡಗೀಯ ಮನೆಯೊಳು ಗಡನೇರಿ ನಾ ಹ್ವಾದ।
ತುಡಿಗೀಲಿ ಹಾಲ್ಕುಡಿದು ಹಾರೀ ಹ್ವಾದೀತವ್ವಾ
ಅಡಕಲ ಗಡಿಗಿ ವಡೆದ್ಹಾಳಮಾಡಿತವ್ವಾ
ಕಾಳಕಡಿಸಗೋಳು ಕೂಡಿಸಿಬಿಟ್ಟಿತ್ತವ್ವಾ
ತುಟ್ಟೀಯ ಕಾಲ್ಫೋಳು ಎಷ್ಟಂತ ಹೇಳಸಲಿ

ಕೆಟ್ಟ ಮಂಗ್ಯಾನ ಸುಟ್ಟು ಮಣ್ಣಾಗಿಡಬಾರ್ದೆ ।
ಮಲ್ಲೀಗೆ.... ॥ ೫ ॥

ಹಪ್ಪಳ ಶಂಡೀಗಿ ಒಪ್ಪುಳ್ಳ ಉಗರಂತ ಛಪ್ಪರ ಮಾಲೊಣ
ಹಾಕಿದ್ದೀವ ।
ನೆರಮನಿ ತಿಪ್ಪವ್ವ ನೋಡಂತ ಹೇಳಿದ್ದೀನ ।
ಒಳಗ ತುಪ್ಪದವ ಕಾಸಾಕ ಹೋಗಿದ್ದೀನ
ಸಪ್ಪಳಿಲ್ದೆ ಮಂಗ್ಯಾ ಬಂದು ಹಪ್ಪಳ ತಿಂದ್ಹೋಯ್ತು
ಛಪ್ಪರ ಖೆಡಿವ್ಹೋಯ್ತು ಚಂಡಾಳಿ ಮಂಗ್ಯಾ। ಮಲ್ಲೀಗೆ....॥ ೬ ॥

ಪಂಚಿಮಿ ಬಂತೆಂದ ಹಂಚಿಟ್ಟಳ್ಳಾ ಹುರಿದ
ಮುಂಚೆ ತಂಬಿಟ್ಟಾವ ಮಾಡಿದ್ದೀನ
ಎಳ್ಳುಂಡೀಯ ಸಾಹಿತ್ಯ ಮಾದ್ದೀನ
ಗೋದಿ ಅಳ್ಳಿಟ್ಟಗಾಂಣವ ಕಾಸಿದ್ದೀನ
ಕಡ್ಲ್ಯುಂಡಿ ಕಟ್ಟಕೇರಿ ನೆಲಿನ ಮ್ಯಾಲ ಇಟ್ಟದ್ದ
ಬೆಳಿಖಿಂಡ್ಯಾಗ್ಹಾಸಿ ಎಳಕೊಂಡ್ವ್ಹೋದಾವ ।
ಮಲ್ಲೀಗೆ.... ॥ ೭ ॥

ಹಬ್ಬ ಬಂದೈತಂತ ಹೆಗ್ಗಲಿ ಹೂರಣಕಿಟ್ಟು
ಉಬ್ಬಿಲಿ ಹೂರಣಗಡಬ ಮಾಡಿದ್ದೆನ
ಉಂಡ ಉಲ್ಲಾಸಾಗಿ ಕುಂತಿದ್ದೆನ
ಕಂಡವುಂದಿನೆಲ್ಲಾ ನೋಡ್ಲಕ್ಹೋಗಿದ್ದೀನ
ಹಿಂಡ್‌ಮಂಗ್ಯಾ ಕೂಡಿಕೊಂಡು ಹಿತ್ತಲದಾಗ ಹಾದೀ ಮಾಡಿ
ಇದ್ದಾಸ್ಹೂರಣಗಡಬ ಎಳಕೊಂಡ್ಹೋದಾವ ।
ಮಲ್ಲೀಗೆ.... ॥೮॥

ವಾರೀಗಿ ಗೆಳೆದಾರು ನೂಲಕ್ಕ ಬಂದಾರ
ನಡುವ ನನ್ನ ಹಾಸ ಇಟ್ಟದ್ದೆನವ್ವಾ
ಛುಕಡಿ ಕವಚ್ ಬಿದ್ದಾರೆ ತರಹ್ವಾದೆಸವ್ವಾ

ಹೊಯ್ದಂತ ಏಳ್ಟುಂಜ ಕೊರಳಿಗಿ ಹಾಯ್ಕೊಂಡು
ಮರನೇರಿ ಕುಂತಾದ ನೋಡ ನೀಲವ್ವಾ ।
ಮಲ್ಲೀಗೆ.... ॥ ೯ ॥

ಊರಾಗ ಗೌಡರ ಮದವಿ ಆಗತಾದ
ಸನಾಯಿ ಸಂಬಳ ತರಸಿದ್ದರವರು
ತೇಗಿಟ್ಟು ಎಲಿಅಡಕಿ ಮೆಲಿತಿದ್ದರವರು
ಬಡಿವಂಥ ಸಂಬಾಳ ಕೊರಳಿಗಿ ಹಾಯ್ಕೊಂಡು
ಮರನೇರಿ ಕುಂತಾದ ನೋಡ ಗಂಗವ್ವಾ । ಮಲ್ಲೀಗೆ....॥೧೦॥

ಹಿಂಡಕೋಳುದು ಬಿಟ್ಟು ಹಾಲ ಕಾಸುದು ಬಿಟ್ಟು
ತೆಪ್ಪಿದಂತ ಸುಡಿಗೋಳು ಒಳಕೂವಳ
ಅಕಿ ಯಾಳಿಯಾಳಿಯಾಕ ಹೇಳುವಳ
ಹತ್ತೇಂಟ ಸುಡಿಗೋಳ ನೆಪ್ಪಿಟ್ಟು ಕಲಸ್ಯಾಳ
ಅಕಿ ಹಲಸೀಗಿ ಹರದಿ ನಿಂಗವ್ವಾ । ಮಲ್ಲೀಗೆ.... ॥ ೧೧ ॥

---

# ದೇವತಾಸ್ತುತಿ

ಸಾಹಿತ್ಯಕ್ಕೆ ನಮ್ಮ ಗ್ರಹಿಕೆ ಅಥವಾ ಶ್ರದ್ಧೆ ಅನುಕೂಲವಾಗಿದ್ದರೆ ಮಾತ್ರ ರಸೋತ್ಪತ್ತಿಯಾಗಬಲ್ಲುದು. ಶ್ರದ್ಧೆ ಮತ್ತು ರುಚಿ ಇವು ಒಂದ ನ್ನೊಂದು ಅತಿಶಯವಾಗಿ ಅವಲಂಬಿಸಿವೆ. ಆದುದರಿಂದ ಯಾವುದೊಂದು ಹೊಸ ಸಾಹಿತ್ಯವನ್ನು ಅವಲೋಕಿಸಬೇಕಾದರೆ ನಾವು ನಮ್ಮ ಪೂರ್ವ ಗ್ರಹಿಕೆ ಗಳನ್ನು ಅದೊಂದು ಗಳಿಗೆಯ ಮಟ್ಟಿಗೆ ಬದಿಗಿರಿಸಿ, ಸಾಹಿತಿಯ ಹೃದಯ ದಲ್ಲಿ ಹೊಕ್ಕು ಅವನೇ ನಾವಾಗಿ ಅವನ ದೃಷ್ಟಿಯಿಂದ ಆತನ ಕೃತಿಯನ್ನು ನಿರೀಕ್ಷಿಸಬೇಕಾಗುವುದು ಎಂದರೆ ಮಾತ್ರ ರಸಾಸ್ವಾದನವು ಲಭಿಸಬಲ್ಲುದು.

ಈ ಮೊದಲನೆಯ ವಿಭಾಗದೊಳಗಿನ ವಿವಿಧ ದೇವತಾಸ್ತೋತ್ರಗಳು ತರ್ಕದ ನೆರಳು ಮುಟ್ಟದ ಸರಳ ಸ್ವಭಾವದ ಸಾಮಾನ್ಯ ನಾರಿಯರ ಹೃದಯ ದಿಂದ ಹೊರಹೊಮ್ಮಿದವುಗಳು. ನಾವು ಅವರ ದೃಷ್ಟಿಯಿಂದ ಇವುಗಳನ್ನು ಹಾಡಿಕೊಂಡರೆ ಅವರಂತೆ ಒಂದು ಗಳಿಗೆ ನಾವೂ ಅನಿರ್ವಚನೀಯ ಭಕ್ತಿಭರ ದಿಂದ ಬಾಗದಿರಲಾರೆವು.

ಇದೀಗಿನದು ಸಮನ್ವಯ ಯುಗವು. ವಿಭೇದದಲ್ಲಿ ಅಭೇದವನ್ನು ಕಂಡುಕೊಳ್ಳುವುದಕ್ಕೆ ಈಗ ಮಾನವರ ಮನವು ಹಾತೊರೆಯುತ್ತಿದೆ. ಇದನ್ನು ನಾವು ಕಂಡುಕೊಳ್ಳುವುದಕ್ಕೆ ಎರಡೆಂದರೆ ಎರಡೇ ಸ್ಥಾನಗಳಿವೆಯೆಂದು ಹೇಳ ಬಹುದು. ಒಂದು ಋಷಿಜೀವನ, ಇನ್ನೊಂದು ಸಾಮಾನ್ಯ ಜೀವನ. ಐಕ್ಯ ವಿರುವುದು ಇವೆರಡೇ ಕಡೆಯಲ್ಲಿ. ವರ್ತಮಾನಕಾಲದಲ್ಲಿ ಋಷಿಜೀವನವು ಇನ್ನೂ ಈಗ ಎಲ್ಲೋ ರೂಪುಗೊಳ್ಳುತ್ತಾ ಇದೆ. ಆದುದರಿಂದ ಅದು ಬಹು ಜನರ ಅವಲೋಕನಕ್ಕೆ ಸಿಗುವುದು ಸದ್ಯಕ್ಕೆ ಬಹು ದುರ್ಲಭ. ಆದ್ದರಿಂದ ಹೃದಯ ಪ್ರಧಾನರಾದ ಸಾಮಾನ್ಯ ಸರಲಜೀವಿಗಳಲ್ಲಿ ಜೀವನದ ಆ ದಿವ್ಯ ಸೂತ್ರವನ್ನು ನಾವು ಕಂಡುಕೊಳ್ಳುವುದು ಅನಿವಾರ್ಯವಾಗಿದೆ. ಮಹರ್ಷಿ "ಟಾಲ್‌ಸ್ಟಾಯ"ರ 'ಆತ್ಮನಿವೇದನ' ಎಂಬ ಪುಸ್ತಕದಲ್ಲಿ ಈ ಮಾತಿನ ಸಮ

ರ್ಥನವು ಸಂಪೂರ್ಣವಾಗಿ ಇದೆ. ಹೀಗೆಂದರೆ ನಾವೆಲ್ಲರೂ ಈಗ ಸಾಮಾನ್ಯ ರಾಗಬೇಕೆಂದು ನನ್ನ ಅರ್ಥವಲ್ಲ. "ಶಿಶುಗಳಂತಾಗದೆ ನಿಮಗೆ ದೇವನ ಸನ್ನಿಧಿಯಲ್ಲಿ ಸ್ಥಳವು ಸಿಕ್ಕದು" ಎಂದು ಉಸುರಿದ ಪುರಾತನ ಮಹಾಪುರುಷರ ವಾಣಿಯ ಅರ್ಥದ ಕಡೆಗೆ ನಮ್ಮ ಲಕ್ಷ್ಯವು ಹೊರಳಬೇಕೆಂಬುದಿಷ್ಟೇ ನನ್ನ ಇಚ್ಛೆ.

ಅರ್ಥವಿಲ್ಲದೆ ಹಳೆಯದೆಲ್ಲಾ ಒಳ್ಳೇದೆನ್ನುವವರು ಕೆಲವರು. ಹಳೆಯದೆಲ್ಲಾ ಜೊಳ್ಳು ಎನ್ನುವವರು ಇನ್ನು ಕೆಲವರು. ಒಮ್ಮೆ ಜೊಳ್ಳೆಂದು ಒಗೆದು ಮರಳಿ ಬಹುಕಾಲದ ಮನಸದಿಂದ ಮತ್ತೆ ಹಳೆಯದನ್ನು ಬಲವಾಗಿ ಅಂಟಿಕೊಳ್ಳುವವರು ಬೇರೆ ಕೆಲವರು. ಆದರೆ ನಾವೀಗ ಈ ಮೂರು ಮೆಟ್ಟಲುಗಳನ್ನು ದಾಟಿ ಹಳೆಯದರೊಳಗಿನ ಸತ್ಯದ ಬೀಜಗಳನ್ನು ಆರಿಸಿಕೊಂಡು ಪುನಃ ಹೊಸ ಭೂಮಿಯಲ್ಲಿ ಬಿತ್ತಿ ಹೊಸ ಬೆಳೆಯನ್ನು ಮಾಡಿಕೊಳ್ಳಬೇಕಾಗಿದೆ. ಈ ದೃಷ್ಟಿಯಿಂದ ನಾವು ಈ ಹಾಡುಗಳೊಳಗಿನ ಐಕ್ಯದ ಸತ್ಯ ಬೀಜವನ್ನು ಆರಿಸಿಕೊಂಡು ಮುಂದಿನ ಹೊಸ ಸಂಸ್ಕೃತಿಯ ಸಾಗುವಳಿಯ ಕಡೆಗೆ ಹೊರಳಬೇಕಾಗಿದೆ.

ಸಾಮಾನ್ಯ ಜನರ ಹೃದಯದಲ್ಲಿ ಜಾತಿಭೇದ, ದೇವತಾಭೇದಗಳ ಕಲ್ಪನೆಯು ಇಲ್ಲವೆ ಇಲ್ಲವೆಂದರೂ ನಡೆಯುವುದು. ಅವರು ಭೇದವನ್ನು ಜನರೂಢಿ ಇಲ್ಲವೆ ಹಿರಿಯರ ಅಜ್ಞೆಯಿಂದು ಪಾಲಿಸುವರೇ ವಿನಾ ಅಂತಃಕರಣದಲ್ಲಿ ಅದಕ್ಕೆ ಅವರು ಸ್ಥಳವನ್ನೇ ಕೊಟ್ಟಿರುವುದಿಲ್ಲ. ಆ ಸ್ವಾಭಾವಿಕ ಐಕ್ಯಕ್ಕೆ ಎರವಾದವರೆಂದರೆ ಹೆಚ್ಚಿನವರೆನಿಸಿಕೊಳ್ಳುವವರೆ.

ಒಂದೊಂದು ಪ್ರದೇಶದಲ್ಲಿ ಒಂದೊಂದು ವಿಶಿಷ್ಟ ದೇವತಾಸ್ಥಾನವು ಪ್ರಖ್ಯಾತವಾಗಿರುತ್ತದಷ್ಟೆ. ಆಯಾ ಪ್ರದೇಶದೊಳಗಿನ ಬಹು ಸಾಮಾನ್ಯರೆಲ್ಲ ಯಾವ ಭೇದವನ್ನೂ ಎಣಿಸದೆ ಆ ಪವಿತ್ರಸ್ಥಾನದ ಮಹಿಮೆಯನ್ನು ಕೊಂಡಾಡುವುದರಲ್ಲಿ ಮಗ್ನರಾಗಿರುತ್ತಾರೆ. ಇಂತಹ ಬೇರೆ ಬೇರೆ ಪ್ರದೇಶಗಳ ನಾಲ್ಕೈದು ಹಾಡುಗಳನ್ನು ನಾವಿಲ್ಲಿ ಸಂಗ್ರಹಿಸಿದ್ದೇವೆ. ಅವುಗಳಲ್ಲಿ ಪ್ರತಿಯೊಂದೂ ಅಷ್ಟೇ ಓಜಸ್ಸುಳ್ಳವಾಗಿವೆ.

## ಗಣಪತಿಯ ಸ್ತೋತ್ರ

ಈ ಹಾಡಿನ ಮೊದಲನೆಯ ನುಡಿಯಲ್ಲಿ ಪೂಜೆಯ ಪರಿಯೂ ಮುಂದಿನ ಮೂರು ನುಡಿಗಳಲ್ಲಿ ನೈವೇದ್ಯದ ವಿಸ್ತಾರವೂ ವರ್ಣಿಸಲ್ಪಟ್ಟಿವೆ. ಕೊನೆಯ ನುಡಿಯು ಸಾಂಪ್ರದಾಯಿಕವಾಗಿದೆ.

**ಛಂದಸ್ಸು:—** ಐದೈದು ಮಾತ್ರೆಯ ಗಣಗಳಿವೆ. ಮೊದಲನೆಯ ನುಡಿಯಲ್ಲಿ ಒಂದು ದೊಡ್ಡ ಚರಣವು ಹೆಚ್ಚಿಗೆ ಬಿದ್ದಿದೆ.

**ಶಬ್ದಪ್ರಯೋಗಗಳು:—** ಸಾಜ=ಶೃಂಗಾರ. ಸೆಳೆಮಂಚ=ತೂಗುಮಣೆ. ಸೋಬಸ್ತ=ಶೋಭಿಸುತ್ತ. ಏರಸ್ತ=ಏರಿಸುತ್ತೇನೆ. ಥೊರಿಪೂಜಿ=ವೈಭವದ ಪೂಜೆ. ಸೆಂಡಗಿ, ಹಪ್ಪಳ, ಶಾಂವಗಿ, ಚಿಗುಳಿ ಇವು ಭೋಜನದ ಪದಾರ್ಥಗಳು. ಚಿನ್ಪಾಲ್ ಮತ್ತು ಬಚ್ಚೀವ ಎಂಬವುಗಳೂ ಅವೇ. ಆದರೆ ಇವೆರಡರ ಸರಿಯಾದ ಕಲ್ಪನೆ ಮಾತ್ರ ಬರುವಂತಿಲ್ಲ.

"ಚಿಟುಬಾಳಿ ಅಗಲೋಳು ಗರಿ ಕಾಣಿನ" ಎಂದರೆ ಕಿರಿಬಾಳಿಯ ಎಲೆಯ ಮೇಲೆ ಎಡೆಬಡಿಸಿದ ಸಾಮಗ್ರಿಗಳು, ಎಲೆಯ ನಡುವಿನ ಗರಿ ಕಾಣದಷ್ಟು ತುಂಬಿದ್ದವೆಂದು ಅರ್ಥ.

ಈ ಹಾಡು ಪಾಂಚಾಲ ಜಾತಿಯವರಲ್ಲಿ ಪ್ರಚಾರವುಳ್ಳದ್ದಾಗಿರುವುದರಿಂದ ಅವರ ಆರಾಧ್ಯದೈವತವಾದ ಕಾಲೀದೇವಿಯ ಉಲ್ಲೇಖವು ಕೊನೆಯ ನುಡಿಯಲ್ಲಿದೆ.

---

## ಸೊಲ್ಲಾಪುರದ ಸಿದ್ಧರಾಮೇಶ್ವರ ಸ್ತೋತ್ರ

ಮೊದಲನೆಯ ನುಡಿಯಲ್ಲಿ ಭಕ್ತಳು ಬೆಳಗಿನ ಕುರುಹುಗಳನ್ನು ಕಾಣುತ್ತಾಳೆ. ಎರಡನೆಯ ಮತ್ತು ಮೂರನೆಯ ನುಡಿಗಳಲ್ಲಿ ಅವಳು ಪೂಜೆಗಾಗಿ ಅತ್ತಿಯ ಹಣ್ಣುಗಳನ್ನೂ ಆಲದ ಎಲೆಗಳನ್ನೂ ದೊರಕಿಸುವುದಕ್ಕೆ ತಾನು ಪಟ್ಟ ಶ್ರಮವನ್ನು ಬಣ್ಣಿಸಿರುವಳಲ್ಲದೆ ದೇವರ ಅಲಂಕಾರಗಳನ್ನೂ ಸೂಚಿಸಿದ್ದಾಳೆ. ನಾಲ್ಕನೆಯ ನುಡಿಯಲ್ಲಿ ವಿಧವಿಧದ ಪೂಜೆ, ಐದನೆಯದರಲ್ಲಿ ಗಂಧದ

ಶೃಂಗಾರ, ಆರನೆಯದರಲ್ಲಿ ಹೂವಿನ ಶೃಂಗಾರ, ಏಳನೆಯದರಲ್ಲಿ ನೈವೇದ್ಯ ಇವುಗಳ ವರ್ಣನೆಯಿದೆ. ಎಂಟನೆಯದರಲ್ಲಿ ವಾದ್ಯಘೋಷ, ಒಂಬತ್ತನೆಯದರಲ್ಲಿ ಭಕ್ತೆಯರ ಗಡಣ ಮುಂತಾದ ವಿಷಯಗಳಿವೆ. ಮುಂದಿನ ಮೂರು ನುಡಿಗಳಲ್ಲಿ ಸೊಲ್ಲಾಪುರ ಜಾತ್ರೆಯ ಕಾಲದ ಮೂರು ದಿನಗಳ ವಿವಿಧ ಉತ್ಸವಗಳ ವರ್ಣನೆಯಿದೆ. ಕೊನೆಯ ಎರಡು ನುಡಿಗಳಲ್ಲಿ ಸಿದ್ಧರಾಮೇಶ್ವರನ ಹಾಗೂ ಅವನ ಆರಾಧ್ಯದೈವತಗಳ ಬೇರೆ ಬೇರೆ ಗುಡಿಗಳ ಉಲ್ಲೇಖವಿದೆ

**ಛಂದಸ್ಸು:**—ಮೂರು ಮೂರು ಮಾತ್ರೆಯ ಗಣಗಳಿವೆ ಆದರೆ ಪ್ರತಿಯೊಂದು ಚರಣದ ಸಮಸ್ಥಾನದ ಗಣಗಳನ್ನು ನಾಲ್ಕು ಮಾತ್ರೆಗಳಾಗಿ ಉಚ್ಚರಿಸುವಂತೆ ತೋರುತ್ತದೆ

**ಶಬ್ದಪ್ರಯೋಗಗಳು:**—ಹೆಡಿಯಂಗ-ಹೆಡೆಯಂತೆ ಆಡ್ಯಾವ-ಆಡಿದವು ವಸ್ತ್ರ=ಆಭರಣ ಆಲಪರದು-ಆತುರಪಟ್ಟು ಕಟ್ಟ್ಯಾರ=ಕಟ್ಟಿಹರು ಏರ್ಯಾವ=ಏರಿಹವು ನೇವುದಿ=ನೈವೇದ್ಯ. ಚಿಗಳಿ=ಎಳ್ಳುಬೆಲ್ಲದ ಮುದ್ದೆ. ಬಾಜಿ=ವಾದ್ಯ ಹರದ್ಯಾರು-ನಾರಿಯರು. ಆದರೆ ಹರದಿ ಎಂಬ ಶಬ್ದಕ್ಕೆ ವಾಸ್ತವಿಕವಾಗಿ ವ್ಯಾಪಾರಗಿತ್ತಿ ಎಂದು ಅರ್ಥವಾಗುತ್ತದೆ. ನಾವು ಈ ಶಬ್ದಕ್ಕೆ ಸುಂದರಿ ಇಲ್ಲವೆ ಮನ್ನಣೆಯವಳು ಎಂದು ಅರ್ಥಮಾಡಿಕೊಳ್ಳಬಹುದು. ಸಮತಿ-ಪುರಾಣ ಹೇಳುವ ಸಮಿತಿ. ಸಂಕರಾತರಿ=ಮಕರ ಸಂಕ್ರಾಂತಿ. ಭೋಗಿ=ಸಂಕ್ರಾಂತಿಯ ಮುನ್ನಾದಿನ ಕರಿ=ಸಂಕ್ರಾಂತಿಯ ಮರುದಿನ ನಾಚ=ನೃತ್ಯ. ಟೆಂಗ=ತೆಂಗು ಖಾರೀಕ=ಉತ್ತತ್ತಿ. ಕಮರತಳಿ=ಸೊಲ್ಲಾಪುರದ ಒಂದು ಕೆರೆ. ಗಂಗಿ=ಸಿದ್ಧರಾಮೇಶ್ವರನ ಗುಡಿಯ ಸುತ್ತುಮುತ್ತಲಿನ ಕೊಳ.

## ಪಂಢರಪುರದ ವಿಠೋಬನ ಸ್ತೋತ್ರ

ಮೊದಲನೆಯ ನುಡಿಯಲ್ಲಿ ಮೂರ್ತಿಯ ಅಲಂಕಾರವರ್ಣನೆ, ಎರಡನೆಯದರಲ್ಲಿ ಗುಡಿಯೊಳಗಿನ ಭಜನೆಯ ಮೇಳದ ವರ್ಣನೆ, ಮೂರನೆಯದರಲ್ಲಿ ಕ್ಷೇತ್ರ ವರ್ಣನೆ, ನಾಲ್ಕನೆಯದರಲ್ಲಿ ಭಕ್ತೆಯ ಬಯಕೆ, ಹೀಗೆ ಕ್ರಮವಿದೆ.

**ಛಂದಸ್ಸು:**—ಮೂರು ಮೂರು ಮಾತ್ರೆಯ ಗಣಗಳಿವೆ. ಉತ್ಸಾಹ ರಗಳೆ.

**ಶಬ್ದಪ್ರಯೋಗಗಳು:**—ಇಟ್ಟಗಿ=ಇಟ್ಟಂಗಿ. ನಿಂತಾನ-ನಿಂತಿದ್ದಾನೆ. ಮಂದೀಲ=ಮುಂಡಾಸ. ಗೋಮು=ಪವಿತ್ರ?. ಟೊಂಕ=ಸೊಂಟ. ಹೃದಯದಲ್ಲಿ ಲತ್ತಿಪೆಟ್ಟು=ದೇವರಾಯನ ಎದೆಗೆ ಆತನ ಸತಿಯಾದ ಶ್ರೀಲಕ್ಷ್ಮಿಯು ಬಲವಾದ ಏಟು ಕೊಟ್ಟಿದ್ದಾಳೆ ಎಂದು ಒಂದು ಪೌರಾಣಿಕ ಕಥೆ. ಮಾಳಿ=ಮಾಲೆ. ಬುಕ್ಕಿಟ್ಟು=ಕಪ್ಪು ಗಂಧದ ಪುಡಿ. ಔಂದೇಅಂಸ=ಅವನದೇ ವಂಶ. ಭಜನೆಗೋಳು=ಭಜನೆಗಳು. ಲಿಂಗಾಕಾರ=ಲಿಂಗದಾಕಾರ. ಟಿಳಕಬಟ್ಟು=ತಿಲಕದ ಬೊಟ್ಟು. ಪುಂಡಲೀಕ=ವಿಠ್ಠಲರಾಯನ ಒಬ್ಬ ಮಹಾಭಕ್ತ. ಬೌದ್ಧ್ಯರೂಪ=ವಿಠೋಬನು ಬೌದ್ಧಾವತಾರನೆಂದು ಜನರೂಢಿ.

---

# ಎಡವೂರ ವೀರಭದ್ರನ ಸ್ತೋತ್ರ

ಮೊದಲನೆಯ ಪದ್ಯದಲ್ಲಿ ಛತ್ರಚಾಮರಾದಿಗಳ ವರ್ಣನೆ. ಎರಡನೆಯ ಮೂರನೆಯ ಪದ್ಯಗಳಲ್ಲಿ ಮೂರ್ತಿಯ ವಿಶಿಷ್ಟ ಶೃಂಗಾರ. ನಾಲ್ಕನೆಯದರಲ್ಲಿ ವಿವಿಧ ಪತ್ರಪುಷ್ಪಗಳ ವರ್ಣನೆ. ಐದನೆಯದರಲ್ಲಿ ವಾದ್ಯವಿವರಣೆ.

**ಛಂದಸ್ಸು:**— ಐದೈದು ಮಾತ್ರೆಯ ಗಣಗಳಿವೆ. ಇದು ಲಲಿತ ರಗಳೆ.

**ಶಬ್ದಪ್ರಯೋಗಗಳು:**— ಎಡವೂರ=ಬೆಳಗಾಂವಿ ಜಿಲ್ಹೆಯಲ್ಲಿಯ ಒಂದು ಊರು. ತಳ=ಸ್ಥಳ. ಗುಗ್ಗಳ= ಶೃಂಗರಿಸಿದ ಮಣ್ಣಿನ ಪಾತ್ರೆಯಲ್ಲಿ ಉರಿಯುವ ದೀವಟಿಗೆ. ಅಬತಾಗಿರಿ=ಒಂದು ಬಗೆಯ ಛತ್ತರಿಕೆ. ಶರಣಬಂದು=ನಮಿಸಿಬಂದು. ಕರಣ=ವಿವಿಧ ಶೃಂಗಾರ (?). ಪೂಜಿಗೋಳ ಬನ್ನಿ=ಪೂಜೆಮಾಡೋಣ ಬನ್ನಿರೆ. ಚಿಳ್ಳುಂಗ್ರ=ಕಾಲಬೆರಳಿನ ಒಂದು ಬಗೆಯ ಉಂಗುರ. ಕ್ವಾರ್ಮೀಶಿ=ಕೋರೆ ಮೀಸಿ. ಕರಿ=ಕಪ್ಪು. ನೆನದಾನ=ತಳವೂರಿ ನಿಂತಿದ್ದಾನೆ. ತುಂಗಭದ್ರಿ ಕಾಳಿ=ಉಪದೇವತೆಗಳು. ವಾಲಗ=ಉತ್ಸವದ ಓಲಗ. ಚಿಟ್ಟ=ಚಿಕ್ಕ. ಸಮುದುರದಾನ=ಸಮುದ್ರದೊಳಗಿನ. ಬೆಲ್ಲಪತ್ತುರಿ=ಬಿಲ್ವಪತ್ರ. ನೆಪೇರಿ=ತುತೂರಿ. ಪಾತರ ಮ್ಯಾಳ=ವೇಶ್ಯೆಯರ ಮೇಳ.

---

# ಪ್ರಣಯಾಂತರ

ಪ್ರಣಯವು ಜೀವನದ ಒಂದು ಅತಿಮಹತ್ವದ ಭಾಗವಾಗಿದೆಯೆಂಬುದು ನಿರ್ವಿವಾದವಾದ ಮಾತು. ಈಚೆಗೆ ಜಗತ್ತು ಈ ವಿಷಯದಲ್ಲಿ ಬಹಳವಾಗಿ ಲಕ್ಷ್ಯವನ್ನು ಪೂರಯಿಸುತ್ತಿರುವುದು. ಈ ಬಗೆಗೆ ಈಗ ನಡೆದಿರುವ ಘನವಾದ ವಿಚಾರಪ್ರವಾಹವನ್ನು ನೋಡಿದರೆ ಪ್ರಣಯದ ಮೇಲಿನ ಇಂದಿನ ಕಟ್ಟುಗ್ರವಾದ ಬಂಧನಗಳಷ್ಟೋ ಇನ್ನು ಮುಂದೆ ಸಡಿಲಬಹುದಾಗಿ ಕಂಡರೂ ಪ್ರಣಯಾಂತರದ ಕೋಪವು ಮಾಯವಾದೀತೋ ಇಲ್ಲವೋ ಎಂಬುದು ಸಂದೇಹದ ಮಾತೇ ಆಗಿದೆ. ಏಕೆಂದರೆ ಈ ಕೋಪವು ನಾವು ತಿಳಿದುಕೊಂಡಿರುವಂತೆ ಕೇವಲ ಸಾಮಾಜಿಕವಾಗಲಿ, ಬೌದ್ಧಿಕವಾಗಲಿ ಆಗಿರದೆ ಅದು ಜೀವದ ಅತ್ಯಂತ ಆಳವಾದ ಹೃದಯನೆಂಬ ಪ್ರದೇಶಕ್ಕೆ ಸಂಬಂಧಿಸಿದುದಾಗಿದೆ ಎಂದು ಎನಿಸುತ್ತದೆ. ಪ್ರಣಯದ ಮಾತಂತೂ ಒತ್ತಟ್ಟಿಗಿರಲಿ, ಆದರೆ ಗೆಳೆತನದ ಆಳವಾದ ಪ್ರೇಮದಲ್ಲಿ ಕೂಡ ಈ ಮಾತು ಅನುಭವಕ್ಕೆ ಬರುತ್ತದೆ. ತನ್ನ ಅಕ್ಕರತೆಯ ಗೆಳೆಯನು ಇನ್ನೊಬ್ಬನೊಡನೆ ತನಗಿಂತ ಹೆಚ್ಚಿನ ಪ್ರೀತಿಯನ್ನು ತೋರಿಸುತ್ತಿದ್ದಾನೆಂದು ಎನಿಸಿದರೆ, ಈತನ ಹೃದಯದಲ್ಲಿ ಅತುಲನೀಯವಾದ ಸಂಕಟವೇಳುವುದುಂಟು. ಹೀಗೆಂದ ಮೇಲೆ ಪ್ರೇಮದ್ದೇ ಇನ್ನೊಂದು ಸ್ವರೂಪವಾದ ಪ್ರಣಯಕ್ಕೆ ಈ ಮಾತು ಹೇಗೆ ಸಂಬಂಧಿಸದೆ ಇದ್ದೀತೆಂಬುದೇ ಇಂದು ಊಹಿಸಲಶಕ್ಯವಾಗಿದೆ.

ಇದೀಗ ನಾವು ಪ್ರಣಯಾಂತರವೆಂಬ ವಿಭಾಗದಲ್ಲಿ ಸಂಗ್ರಹಿಸಿದ ಹಾಡುಗಳು ಆರು. ಇವುಗಳಲ್ಲಿ ಕೊನೆಯದಾದ ಪಾರ್ವತಿಯ ಪರಿತಾಪದ ಹಾಡು ಮೇಲ್ಕಂಡ ನಮ್ಮ ಮಾತನ್ನು ಬಲವಾಗಿ ಸಮರ್ಥಿಸುವಂತಿದೆ. ತಮ್ಮ ಪ್ರಿಯ ವ್ಯಕ್ತಿಯು ಕೇವಲ ತಮ್ಮೊಬ್ಬರ ಪಾಲಿಗೇ ಸಂಪೂರ್ಣವಾಗಿ ಉಳಿದು ಇರಬೇಕೆಂಬ ಅಂತರಂಗದ ಆಸೆಯು ಬಹು ಪ್ರಬಲವಾಗಿರುತ್ತದೆ ಎಂಬುದು ಅನುಭವದ ಹೊರಗಿನ ಮಾತೇನೂ ಅಲ್ಲ.

ಪ್ರಣಯಾಂತರದ ಮುನಿಸಿಗೆ ಸಾಹಿತ್ಯ ಶಾಸ್ತ್ರದಲ್ಲಿ ಮತ್ತು ಬಂಗಾಲದ ಭಕ್ತಿಶಾಸ್ತ್ರದಲ್ಲಿ "ಮಾನ'ವೆಂದು ಹೆಸರಿಡಲಾಗಿದೆ. 'ಗೀತಗೋವಿಂದ'ದಲ್ಲಿ ಈ ಮಾತಿಗೆ ಸಾಕಷ್ಟು ಉದಾಹರಣೆಗಳಿವೆ.

ಪ್ರಣಯಾಂತರದ ಕುಶಲಪ್ರಶ್ನೋತ್ತರಗಳು ರಸಿಕರ ಚಿತ್ತವನ್ನು ರಂಜಿಸುವುದರಲ್ಲಿ ಮಿಗಿಲಾದವುಗಳು. ಪ್ರಣಯಿಗಳಲ್ಲಿ ಆರೋಪಿತವ್ಯಕ್ತಿಯು ತನ್ನ ಅವ್ಯಭಿಚಾರಿತ್ವವನ್ನು ಎಷ್ಟು ಸಮರ್ಥನಗೊಳಿಸಿದರೂ ಆರೋಪಕನಿಗೆ ನಿಸ್ಸಂದೇಹವುಂಟಾಗದಿರಲು ಕೊನೆಗೆ ಸತ್ಯವಂತಿಕೆಯ ಕೋಪ. ಆರೋಪಕ ವ್ಯಕ್ತಿಯ ಕೋಪವು ವಿಚ್ಛೇದಕರವಾದರೆ ಆರೋಪಿತ ವ್ಯಕ್ತಿಯ ರೋಷವು ಸಂಯೋಗಕರವಾಗಿರುತ್ತದೆ. ಶಾಕುಂತಳದಲ್ಲಿ ನಾಯಕನ ಸಂದೇಹಗಳಿಗೆಲ್ಲ ಉತ್ತರ ಹೇಳಿ ಬೇಸತ್ತ ನಾಯಿಕೆಯು ಕೊನೆಗೆ ಮುನಿಸಿನಿಂದ 'ಅನಾರ್ಯಾ' ಎಂದು ಸಂಬೋಧಿಸಿದಾಗಲೆ ಆತನಲ್ಲಿ ತುಸುವಾದರೂ ವಿವೇಕವು ಹುಟ್ಟುತ್ತದೆಯಲ್ಲವೇ ?

ನಾನು ಮೊದಲಿಗೆ ಹೇಳಿದ ಕೋಪದ ಜಾತಿಯೂ ಇದೂ ಭಿನ್ನವಾಗಿವೆ. ಈ ಹಾಡುಗಳೊಳಗಿನ ರೋಷವು ರಸಪೋಷಕವಾಗಿದೆ.

---

## 'ನಾರಿ ರುಮ್ಮಾಲ ಸುತ್ತಿ'

ಮಗಳನ್ನು ತನ್ನ ತಮ್ಮನಿಗೆ ಮದುವೆಮಾಡಿಕೊಟ್ಟ ಒಬ್ಬ ಅಕ್ಕ ಹೇಳುವ ಹಾಡಿದು. ತಮ್ಮನು ತನ್ನ ಮಡದಿಯನ್ನು ಬಿಟ್ಟಿದ್ದಾನೆ. ಸೂಳಿ ಗೇರಿಯಲ್ಲಿ ಆತನು ಸುಳಿದಾಡುತ್ತಿರುವುದನ್ನು ನೋಡಿ ಅಕ್ಕನು ಆಡುವ ಮಾತುಗಳು ಮೊದಲಿನ ಎರಡು ನುಡಿಗಳಲ್ಲಿವೆ. ಮುಂದಿನ ಎರಡು ನುಡಿ ಗಳಲ್ಲಿ ತನ್ನ ಮಗಳ ಕೋಮಲತೆ ಮತ್ತು ಪವಿತ್ರತೆ ಇವುಗಳನ್ನು ಕೊಂಡಾಡಿ ಪರ್ಯಾದಿಂದ ಅವನ ದುರ್ದೈವವನ್ನು ಹಳಿಯುವಳು. ಆ ಮೇಲೆ ಅವಳಿಗೆ ಅಲ್ಲಿ ಆತನ ಸುಳಿದಾಟದ ಕಾರಣವು ಬೇರೆಯಾಗಿ ತೋರುವುದು. ಆತನು ತನ್ನ ಹೆಂಡತಿಯು ಕೆಟ್ಟಿರಬಹುದೇನೆಂದು ಪರೀಕ್ಷಿಸಲಿಕ್ಕೆ ಹಾಗೆ ಸುಳಿಯುತ್ತಿ ದ್ದಾನೆಂದು ಎನಿಸಿ, ಅವಳು ಮುಂದಿನ ಎರಡು ನುಡಿಗಳಲ್ಲಿ "ಬಿಟ್ಟವಳ ಮೇಲೆ

ಮತ್ತೆ ನಿನ್ನ ಲಕ್ಷ್ಯವೇಕೆ?" ಎಂದು ಅವನನ್ನು ಕುರಿತು ಆಡಿಕೊಳ್ಳುವಳು. ಅದರ ಮುಂದಿನ ಎರಡು ನುಡಿಗಳಲ್ಲಿ ಅವನಿಗೆ ಅಣಕವನ್ನಾಡಿ ತನ್ನ ಮಗಳ ಶುದ್ಧತೆಯನ್ನು ಬಿಂಕದಿಂದ ಪ್ರಶಂಸಿಸುವಳು. ಕೊನೆಯ ಎರಡು ನುಡಿಗಳಲ್ಲಿ ಅಕ್ಕರತೆಯಿಂದ ಜೋಪಾನ ಮಾಡಿದ ತನ್ನ ಮಗಳ ದುರವಸ್ಥೆಯಿಂದ ಪರಿತಾಪ ಪಡುವಳು.

**ಛಂದಸ್ಸು:**—ತ್ರಿಪದಿಯೇ.

**ಶಬ್ದ ಪ್ರಯೋಗಗಳು:**— ವಾರಿ=ಸೊಟ್ಟ. ಹ್ವಾರೆ=ಉದ್ಯೋಗ. ಕಟ್ಟೆ ಕಲ್ಲಾಗಿ ಇರಹೋಗು=ಸೂಳೆಯರ ಮನೆಯ ಮೆಟ್ಟಲುಗಳ ಕಲ್ಲಾಗಿ ಅವರ ಪಾದತಾಡನದ ಸುಖವನ್ನು ಉಣ್ಣು ಹೋಗು. ಅಲ್ಲಿಟ್ಟ ಇಲ್ಲಿಟ್ಟ=ಹೂವಿನಂತಹ ಮಗಳನ್ನು ಪರಿಪರಿಯಿಂದ ಎತ್ತಿ ಮುದ್ದಾಡಿ ಜೋಪಾನಮಾಡಿದೆನು ಕಲ್ಲ ಮ್ಯಾಲಿಟ್ಟ=ಕೊನೆಗೆ ದಾಂಪತ್ಯಧರ್ಮವೆಂಬ ಕಠಿನಪಾಷಾಣದ ಮೇಲೆ ಇರಿಸಿ ದೆನು. ಛಂದ=ಶೋಭೆ. ನಾರ್ಯಾರು=ನಾರಿಯರು. ಬಿಟ್ಟಕ್ಕಿ=ಬಿಡಲ್ಪಟ್ಟವಳು.

---

## 'ಹಣ್ಣು ಬಂದಾವ ಹಣ್ಣು'

ಹೆಂಡತಿಯನ್ನು ಅಗಲಿ ಬಹಳ ದಿನ ವ್ಯಾಪಾರಕ್ಕೆಂದು ಮಲ್ಲಾಡ ದೇಶಕ್ಕೆ ಹೋಗಿದ್ದ ಶೆಟ್ಟಿಯು ಮರಳಿ ಬಂದು ಬೇರೆ ವೇಷದಿಂದ ತನ್ನ ಮಡ ದಿಯ ಪಾತಿವ್ರತ್ಯವನ್ನು ಪರೀಕ್ಷಿಸುತ್ತಾನೆ. ಈ ಇಡೀ ಹಾಡಿನಲ್ಲಿ—ಒಂದು ನುಡಿಯಲ್ಲಿ ಅವನ ಕೌಶಲ್ಯದ ಪ್ರಶ್ನವೂ ಇನ್ನೊಂದು ನುಡಿಯಲ್ಲಿ ಅವಳ ಅದೇ ಬಗೆಯ ಉತ್ತರವೂ ಇವೆ.

**ಛಂದಸ್ಸು:**—ಸಾಂಗತ್ಯಕ್ಕೆ ಸಮೀಪವಾದುದು.

**ಶಬ್ದ ಪ್ರಯೋಗಗಳು:**— ಪಾಳ್ಯಾ=ದಂಡೆ. ಕೊಳತೇವು=ಕೊಂಡುಕೊ ಳ್ಳುತ್ತೇವೆ. ನಾಲೂರು=ನಾಲ್ವರು. ಭಾಂಯಿ=ಬಾವಿ. ಅರೂಟಿಗಿ=ಅರವಟ್ಟಿಗೆ. ಎಲಮ=ಏನೇ. ಇರsನೆ ಮತ್ತು ಒಡದೂನೆ ಎಂಬಲ್ಲಿ 'ನೆ' ಎಂಬುದು ಪದ ಪೂರಣಕ್ಕಾಗಿ ಬಂದ ಅರ್ಥವಿಲ್ಲದ ಅಕ್ಷರವು. ಹೆಣ್ಣುಮಕ್ಕಳ ಹಾಡುಗಳ ಲ್ಲೆಲ್ಲಾ ಇದು ಬಹಳ ಕಡೆಗೆ ಬರುತ್ತದೆ. ಇದಕ್ಕೆ ಅರ್ಥಹಚ್ಚುವುದೇ ಆದರೆ

'ಶಿ' ಎಂಬ ಅಕ್ಷರದಂತೆ ಇದನ್ನು ತಿಳಿದುಕೊಳ್ಳಬಹುದು.

---

## ' ಸಬ್ಬಂಬು ರಾತೂರಿ '

ಹಿಂದಿನ ಹಾಡಿನಂತೆ ಇದರಲ್ಲಾದರೂ ಕ್ರಮದಿಂದ ಪ್ರಶ್ನೋತ್ತರಗಳಿವೆ. ಇಂಥದೊಂದು ಹಾಡು ಗೀತಗೋವಿಂದದಲ್ಲಿದೆ. (" ರಜನಿ ಜನಿತ ಗುರು ಜಾಗರ".) ರಸಿಕರಿಗೆ ಈ ಹಾಡಿನ ರಹಸ್ಯವು ಸ್ಪಷ್ಟವೇ ಇದೆ. ರೂಢ ಶಬ್ದಗಳ ಅರ್ಥವನ್ನು ಮಾತ್ರ ಇಲ್ಲಿ ಹೇಳಿದೆ.

**ಛಂದಸ್ಸು:—** ತ್ರಿಪದಿಗೆ ಸಮೀಪವಾದುದು.

**ಶಬ್ದಪ್ರಯೋಗಗಳು:—** ಸಬ್ಬಂಬು ರಾತೂರಿ = ಕಟ್ಟಿರುಳು. ಬೆಟ್ಟಂಬು ಬ್ಯಾಸಿಗಿ=ಕಡುಬೇಸಗೆ. ತನುಗಾಳಿ=ತನುವುಳ್ಳ ಗಾಳಿ ಅಥವಾ ತಂಗಾಳಿ. ಘಾಯ=ಗಾಯ. ಚ್ಯೂರು=ಚಿವುರು. ಹತ್ತು ವಾರ=ಹತ್ತು ಗಜ. ಸಗತಿ ಹೊಡಿ=ಸಾಮು ತೆಗೆ. ಕೃಷ್ಣರು=ಕೃಷ್ಣನಂಥ ಗೆಳೆಯರು (?). ಬಾಂಪ್ ಪಾಟ್ಲಿ=ಮುಖೋದ್ಗತವಾಗಿ.

---

## ಕೊರವಂಜೀ ಹಾಡು

ಮಗನೊಬ್ಬನು ತನ್ನ ಮಡದಿಯನ್ನು ಬಿಟ್ಟು ಸೂಳೆಯೊಡನೆ ಬೇರೂರಲ್ಲಿದ್ದಾನೆ. ಆತನ ತಾಯಿಯು ಆತನೊಮ್ಮೆ ಬಂದಾಗ ತನ್ನ ಸೊಸೆಯ ರೂಪವನ್ನು ವರ್ಣಿಸಿ ಅವಳೊಡನೆ ಇರುವುದಕ್ಕೆ ಮನವೊಲಿಸಲೆಳಸುತ್ತಾಳೆ. ಆದರೆ ಆತನು ಇದಕ್ಕೆ ಒಪ್ಪುವುದಿಲ್ಲ. ಇದು ಮೊದಲಿನ ನಾಲ್ಕು ನುಡಿಗಳ ಸಾರಾಂಶ. ಆ ಮೇಲೆ ಅವಳು ಉಪಾಯವಿಲ್ಲದೆ ತನ್ನ ಅಕ್ಕರತೆಯ ಸೊಸೆಗೆ ತವರೂರಿಗೆ ಹೋಗಲು ಹೇಳುತ್ತಾಳೆ. ಅದಕ್ಕೆ ಅವಳು ಒಪ್ಪುವುದಿಲ್ಲ. ಕೊರವಂಜಿಯ ಬುಟ್ಟಿಯೊಂದನ್ನು ಕೊಡುಕೊಟ್ಟರೆ ತಾನು ಗಂಡನ ಸಮಾಚಾರವನ್ನು ನೋಡಿಕೊಂಡು ಬರುವೆನೆಂಬುದಾಗಿ ಹೇಳಿ ಹಾಗೆ ಮಾಡುತ್ತಾಳೆ. ಇಲ್ಲಿಗೆ ಮತ್ತೆ ಮೂರು ನುಡಿಗಳು ಮುಗಿದವು. ಮುಂದಿನ ೮ ನುಡಿಗಳಲ್ಲಿ ಅತ್ತೆ ಕೊಟ್ಟ ಮಾಣಿಕ ಹಚ್ಚಿದ ಬುಟ್ಟಿಯನ್ನು ತೆಗೆದುಕೊಂಡು ದನಕಾಯುವ

ಹುಡುಗರಿಗೆ ತನ್ನ ರಾಯರಿರುವ ರಾಜಪಟ್ಟಣದ ಹಾದಿಯನ್ನು ಕೇಳುವಳು. ಅವರು ಹೇಳಿದಂತೆ ಬೇರೆ ಬೇರೆ ಉಡುಪುಗಳನ್ನು ಉಟ್ಟುಕೊಂಡು ತನ್ನಂತಹ ಬಾಲೆಯರನ್ನೂ ಹರದೆಯರನ್ನೂ ಬಲಗೊಂಡು ಅಲ್ಲಿಗೆ ಹೋಗುವಳು. ಆ ಮೇಲೆ ಅವಳು ಭವಿಷ್ಯವನ್ನು ಹೇಳುವ ಕೊರವಂಜಿಯ ವೇಷದಿಂದ ಗಂಡನ ಹತ್ತಿರ ಹೋಗಿ—"ನಿನಗೆ ಸೂಳೆಯರ ಕೈಯಲ್ಲಿ ಮರಣವುಂಟೆ"ಂದು ಕಣಿ (ಶಕುನ) ಹೇಳುತ್ತಾಳೆ. ಅದಕ್ಕೆ ಅವನು "ವಶೀಕರಣ ವಿದ್ಯೆಯಿಂದ ತನ್ನ ಹೆಂಡತಿಯನ್ನು ತನಗೆ ಕೂಡಿಸೆ"ಂದು ಬಿನ್ನವಿಸುತ್ತಾನೆ. ಆಗ ಅವಳು ತನ್ನ ನಿಜರೂಪವನ್ನು ಪ್ರಕಟಿಸುತ್ತಾಳೆ. ಇಬ್ಬರೂ ಕೂಡಿ ತಮ್ಮ ಊರಿಗೆ ಹೊರಡುತ್ತಾರೆ. ಆಗ ಅವನ ಸೂಳೆಯು ತಾನೂ ಬರುವೆನೆಂದು ಬೆನ್ನುಹತ್ತಲು ಇವರು ಅವಳನ್ನು ಹಿಂದಕ್ಕೆ ನೂಕಿ ಮುಂದೆ ಹೊರಡುತ್ತಾರೆ. ಕೊನೆಗೆ ಮನೆಯ ಬಾಗಿಲಿಗೆ ಹೋಗಿ ಆ ಬಾಲೆಯು ತನ್ನ ಅತ್ತೆಗೆ—'ಸಂಭ್ರಮವನ್ನು ನೋಡುಬಾರೆ'ಂದು ಹೊರಕ್ಕೆ ಕರೆಯುತ್ತಾಳೆ. ಇಲ್ಲಿಗೆ ಹಾಡು ಮುಗಿಯುವುದು.

**ಛಂದಸ್ಸು**:— ತ್ರಿಪದಿಗೆ ಸಮೀಪವಾಗಿದೆ. ಆದರೆ ಅನ್ನುವ ಮಟು ಎರಡು ವಿಧವಾಗಿದೆ.

**ಶಬ್ದಪ್ರಯೋಗಗಳು**.— ಅಬರಂಗ ಧೊರಿ=ಅಭ್ರಕದಂತೆ ನುಣುಪುವೈಯುಳ್ಳ ರಾಜಪುರುಷ. ಛೆಲವಿ=ಸುಂದರಿ. ಮುಕದೋರು=ಮುಖ ತೋರಿಸು. ದಟ್ಟಿ=ಸೀರೆ, ದುಕೂಲ. ಸುಳಿಗಾರ=ಸಂಚಾರಿ. ನಿಂಬಿ=ಲಿಂಬಿ. ಕೊರವಂಜಿ=ಕುಂಚೀಕೊರವರ ಹೆಂಗಸು. ದ್ಯಾವರ್ಹೇಳು=ದೇವಾವೇಶದಿಂದ ಭವಿಷ್ಯ ಹೇಳುವಿಕೆ. ಕೈ ತಾ=ಅಂಗೈ ತೋರಿಸು. ಮಾಡಿಹೊಡಿ=ಮದ್ದುಹಾಕಿ ಕೊಲ್ಲು. ಗರದೀಲೆ=ಸಂಭ್ರಮದಿಂದ. ರಂಡಿ=ಸೂಳೆ. ಹೊಡಮಳ್ಳಿ=ಹಿಂತಿರುಗಿ. ಹೊಳ್ಳು=ಹೊರಳು. ಚೆವ್ವಾಲಿ=ಹೆಣ್ಣುಮಕ್ಕಳು ಮೆಟ್ಟುವ ಕಾಲ್ಮರೆ.

- - - -

# ಗಂಗೀ ಗೌರೀ ಹಾಡು

(೧)

ಶಿವನು ಗಂಗೆಯನ್ನು ತರುವುದಕ್ಕೆ ನಂದಿಯನ್ನೇರಿ ಹೊರಡುತ್ತಾನೆ.

(ನುಡಿ ೧-೨). ಹಳ್ಳದ ದಂಡೆಯ ಮೇಲೆ ಹೂಗಳನ್ನು ಎತ್ತುತ್ತಿದ್ದ ಗಂಗೆ ಯೊಡನೆ ಪರಿಪರಿಯಾಗಿ ಮಾತಾಡಿ ಕೊನೆಗೆ ಅವಳನ್ನು ತನ್ನ ಜಡೆಯಲ್ಲಿ ಕುಳ್ಳಿರಿಸಿಕೊಂಡು ಬರುತ್ತಾನೆ (೩-೧೧). ಇದನ್ನು ಒಂದು ಗಿಳಿಯು ಕಂಡು ಗೌರಿಗೆ ತಿಳಿಸಲು ಅವಳು ಸಿಟ್ಟಾಗಿ ತವರುಮನೆಗೆ ಹೋಗುತ್ತಾಳೆ. ಅಲ್ಲಿ ತವ ರವರು ಈಕೆಯನ್ನೆ ಜರೆಯುತ್ತಾರೆ. ಆದ್ದರಿಂದ ಅವಳು ತಿರುಗಿ ಶಿವನ ಅರ ಮನೆಗೆ ಬರುತ್ತಾಳೆ(೧೨-೨೧). ಆಗ ಶಿವನು ಒಂದೂರಿನಿಂದ ಯತಿಯ ವೇಷದಲ್ಲಿ ಬರುತ್ತಾನೆ. ಅವನು ಹಾಗೆ ಬಂದು ಗೌರಿಯನ್ನು ನೀರು ಬೇಡಲು, ಅವಳು ಒಂದು ಗಿಂಡಿಗೆ ಬದಲು ಎರಡು ಗಿಂಡಿಗಳನ್ನು ಕೊಡುತ್ತಾಳೆ. ಅದಕ್ಕೆ ಶಿವನು "ನಿನಗೆ ಪುರುಷರು ಇಬ್ಬರೇನೇ?" ಎಂದು ಚೇಷ್ಟೆಮಾಡುತ್ತಾನೆ. ಅವಳು ಅವನ ಜಡೆಯೊಳಗಿನ ಗಂಗೆಯ ಸಮಾಚಾರವನ್ನು ಬೈಲಿಗೆಳೆದು ಅವ ನಿಗೇ ಗೇಲಿಮಾಡುತ್ತಾಳೆ. ಊಟಕ್ಕೆ ಎಡೆಬಡಿಸುವಾಗಲೂ ಮಾತು ಇಲ್ಲಿಗೇ ಬಂದುಮುಟ್ಟುತ್ತದೆ. ಆಗ ಶಿವನು ಗಂಗೆಯನ್ನು ತಾನು ತಂದಿಲ್ಲವೆಂದು ಆಣೆಯನ್ನು ಮಾಡುವುದಕ್ಕೆ ಸಿದ್ಧನಾಗುತ್ತಾನೆ (೨೨-೩೧) ಗೌರಿಯು ಮತ್ತೊಂದು ಹಂಚಿಕೆಯನ್ನು ಮಾಡುತ್ತಾಳೆ. ಎಣ್ಣೆಯನ್ನು ತಕ್ಕೊಂಡು ಅವನ ಜಡೆಗಳಿಗೆ ಹೂಸಲು ಆರಂಭಿಸುತ್ತಾಳೆ. ಆಗ ಗಂಗೆಯು ಗೌರಿಗೆ ಗೊತ್ತಾಗದಂತೆ ಮೆಲ್ಲಗೆ ಸೊಂಟದ ಕಡೆಗೆ ಇಳಿಯುತ್ತಾಳೆ. ಗೌರವ್ವನು ಹಾಗೇ ಕೆಳಕೆಳಕ್ಕೆ ಬಂದಹಾಗೆ ಗಂಗೆಯೂ ಅದಕ್ಕಿಂತ ಕೆಳಗಡೆಗೆ ಸರಿಯುತ್ತ ಕೊನೆಗೆ ನೆಲಮುಟ್ಟಿ ಹೊಳೆಯಾಗಿ ಹರಿದುಹೋಗುತ್ತಾಳೆ (೩೨-೩೫). ಮರುದಿನ ಗೌರಿಯು ರಜಸ್ವಲೆಯಾಗಲು, ಮೈದೊಳೆಯಲು ನೀರಿಲ್ಲದಂತಾಗು ತ್ತದೆ. ಶಿವನು ಬೇಕೆಂತಲೇ ಚೇಷ್ಟೆಯಿಂದ ಎಣ್ಣೆಯ ಹಾಗೂ ತುಪ್ಪದ ಕೊಡಗಳನ್ನು ಸ್ನಾನಕ್ಕೆಂದು ಕಳಿಸುತ್ತಾನೆ. ಗೌರಿಯ ಗರ್ವಭಂಗವಾಗು ವುದು. ಗಂಗೆಯನ್ನು ಕರೆತಾರೆನ್ನುವಳು (೩೬-೪೧).

**ಛಂದಸ್ಸು:**— ತ್ರಿಪದಿಯೇ ಆಗಿದೆ.

**ಶಬ್ದಪ್ರಯೋಗಗಳು:**—ಕೊಂಬಣಸ ಮತ್ತು ಹುಲಗೆಜ್ಜೆ ಇವು ಎತ್ತಿನ ಆಭರಣಗಳು. ತರವೋ=ತರಲಿಕ್ಕೆ. ದಯಮಾಡು=ಕೊಡು. ನೆಂಬಿಗೆ=ನಂಬಿಗೆ. ರಂಭ್ಯಾಳ=ಮಡದಿ (ರಂಭೆ) ಇದ್ದಾಳೆ. ಮನಗು=ಮಲಗು. ಮಕ=ಮುಖ.

ಚಾವುಕೆ=ಪೀಠ. ಥಾಂವಕ್ಕ=ಸ್ಥಾನಕ್ಕೆ. ಮುಟ್ಟಾಗು=ರಜಸ್ವಲೆಯಾಗು. ಖಳ ವ್ಯಾನ=ಕಳಿಸಿದ್ದಾನೆ. ಮುಡಚಟ್ಟ=ಮೈಲಿಗೆ.

---

# ಗಂಗೀ ಗೌರೀ ಹಾಡು

(೨)

ಇದೊಂದು ಭಾವಗೀತೆ ಲೆಕ್ಕದಂತೆ ಮುಂದಿನ ವಿಭಾಗದಲ್ಲಿ ಸೇರಿಸ ಬೇಕಿತ್ತು. ಆದರೆ ಈ ಹಾಡಿನ ವಿಷಯವು ಪ್ರಣಯಾಂತರದ ಪರಿತಾಪವನ್ನು ಸ್ಪಷ್ಟಗೊಳಿಸುವುದರಿಂದ ಈ ವಿಭಾಗದಲ್ಲಿಯೇ ಸೇರಿಸಬೇಕಾಯಿತು. ಇದರಲ್ಲಿ ಗಂಗೆಗೆ ಶಿವನೊಲಿದದ್ದಕ್ಕಾಗಿ ಗೌರಿಯು ಅನುತಾಪಗೊಳ್ಳುವಳು. ಹಿಂದೆ ಗಿರಿರಾಜನ ಮನೆಯಲ್ಲಿದ್ದಾಗ ಶಿವನ ಸಲುವಾಗಿ ಮಾಡಿದ ಘೋರತಪಶ್ಚರ್ಯ ವನ್ನೆಲ್ಲ ನೆನಪಿಗೆ ತಂದುಕೊಟ್ಟು ಶಿವನ ಎದುರಿಗೇ ಕನವರಿಸುತ್ತಾಳೆ.

ಅನ್ನೀಪುರ, ಬನ್ನೀಪುರ ಮುಂತಾದವುಗಳಿಂದ ತುಂಬಿದ ಕಟ್ಟಡವಿಯೊ ಳಗೆ ಹಿಂಸ್ರಪಶುಗಳ ಮಧ್ಯದಲ್ಲಿ ತಾನು ತಪಗೈದೆನೆಂದು ಮೊದಲನೆಯ ನುಡಿ ಯಲ್ಲಿ, ಸ್ವರ್ಗನಗರಿಯ ದಾರಿಯಲ್ಲಿ ಕಲ್ಲುಬಂಡೆಗಳ ಮೇಲೆ ಕುಳಿತು, ಬಗೆ ಬಗೆಯ ರಾಕ್ಷಸರ ತೊಂದರೆಯನ್ನು ಸಹಿಸಿ, ಹತ್ತಿಪ್ಪತ್ತು ಯುಗಗಳ ವರೆಗೆ ತಪಗೈದೆನೆಂದು ಎರಡನೆಯ ಮೂರನೆಯ ನುಡಿಗಳಲ್ಲಿ ಹೇಳುತ್ತಾಳೆ.

**ಛಂದಸ್ಸು**:—ಲಲಿತರಗಳೆ.

**ಶಬ್ದಪ್ರಯೋಗಗಳು** :— ಸಾರಂಗಸರದೂಳಿ = ಸಾರಂಗ ಮತ್ತು ಶಾರ್ದೂಲ ಎನ್ನಮೇಲಾಡಿ=ನನ್ನ ಮೇಲೆ ಮೇಲಾಟಮಾಡಿ, ಅಥವಾ ನನಗಿಂತ ಮಿಗಿಲೆಂದು. ಪಟ್ಟಣದ ದಾರಿ=ಕೈಲಾಸ ಪಟ್ಟಣದ ದಾರಿ. ಕತ್ತೀಯ ವರಿಯ ವರು=ಚರ್ಮದ ಚೀಲದಲ್ಲಿ ಮುಚ್ಚಿದ ಖಡ್ಗವನ್ನು ಧರಿಸಿದ ಅಮಾನುಷರು. ಗಾಂವದ=ಗಾವುದ. ಈ ಶಬ್ದವನ್ನು ಇಲ್ಲಿ 'ಯುಗ' ಎಂಬ ಅರ್ಥದಲ್ಲಿ ಉಪ ಯೋಗಿಸಿದೆ. ಸಾರಂಗ ದಾರಿ=ಸ್ವರ್ಗ ದಾರಿ. ತಪನಿದ್ದ=ತಪವಿದ್ದೆನು. ಭಣವಿ =ಸೊಪ್ಪಿನ ಬಣವೆ ಅಥವಾ ಒಟ್ಟಲು. ಕಿಚಗುಳ್ಳ=ಕಿಚ್ಚಿನ ಬೆರಣಿ, ಎಂದರೆ ಕೆಂಡ. ಒಗತನ=ದಾಂಪತ್ಯ. ಬರಕ್ಯಾದ=ಸುದುವಿದೆ.

# ಭಾವಗೀತಗಳು

ಹೃದಯೋದ್ರೇಕಕ್ಕೆ ಕಾರಣವಾಗುವ ಯಾವುದೊಂದು ಒಂಟಿ ಸಂಗತಿಯನ್ನು ಕುರಿತು ಅದರ ಬೇರೆಬೇರೆ ಮಗ್ಗಲುಗಳನ್ನು ಒಂದೊಂದಾಗಿ ಬಣ್ಣಿಸುತ್ತ ಬಂದ ಹಾಗೆಲ್ಲ ಶ್ರೋತೃವಿನ ಅಂತರಂಗದಲ್ಲಿ ಭಾವಾವೇಗವು ಏಳುತ್ತದೆ. ಇಂತಹ ಹಾಡುಗಳಿಗೆ "ಭಾವಗೀತಗಳೆ"ಂದು ನಾಮಕರಣ ಮಾಡಲಾಗಿದೆ. ಈ ಹಾಡುಗಳಲ್ಲಿ ಒಂದೇ ಪಾತ್ರವು ತನ್ನ ಸ್ವಗತವನ್ನು ಕಲ್ಲು ಕರಗುವಂತೆ ಬಣ್ಣಿಸುತ್ತಿರುವುದುಂಟು.

## ಕೂಸಿನ ಹಾಡು

ಜಾತ್ರೆಗೆ ಹೋದ ಒಬ್ಬ ಹೆಣ್ಣುಮಗಳು ಭಾವಿಯ ದಂಡೆಯ ಮೇಲೆ ನೀರು ಕುಡಿಯುವಾಗ ಜನರ ದಟ್ಟಣೆಯಲ್ಲಿ ಅವಳ ಕೂಸು ತಪ್ಪಿಸಿಕೊಂಡು ಬಿಟ್ಟಿದೆ. ಎಷ್ಟು ಹುಡುಕಿದರೂ ಸಿಗದಂತಾಗಲು ಅವಳು ನೆನೆನೆನೆಸಿ ಅಳುತ್ತಾಳೆ.

**ಛಂದಸ್ಸು** :—ತ್ರಿಪದಿಗೆ ಸಮೀಪವಾಗಿದೆ.

**ಶಬ್ದಪ್ರಯೋಗಗಳು** :—ಕುಂದಲ=ಕುಂದಣ. ಮುಂಡಲ=ಬರಿದಾದ ಸ್ಥಳ. ಹಲ್ಲಿ=ಚಿಕ್ಕ ರೊಟ್ಟಿ. ಇಡಸೀದ=ಇಡಿಸಿರುವೆನು. ತೆಲಿ=ತಲೆ. ಹ್ವಾದ=ಹೋದೆನು.

---

## ಎತ್ತಿನ ಹಾಡು

ಎತ್ತಿನ ಕಡೆಯಿಂದ ಅಡವಿಯಲ್ಲಿ ಬೇಕುಬೇಕಾದಷ್ಟು ಕೆಲಸವನ್ನು ಮಾಡಿಸಿಕೊಂಡು ಅದರ ಸುಖದ ಕಡೆಗೆ ಮಾತ್ರ ಅಲಕ್ಷ್ಯವನ್ನು ಮಾಡಿದರೆ ಅದಕ್ಕೆ ಎಷ್ಟು ದುಃಖವಾಗಬೇಡ! ತಮ್ಮ ಕೆಲಸಗಳನ್ನು ಮುಂದಿಯ ಕಡೆ

ಯಿಂದ ಬೇಕಾದ ಹಾಗೆ ಮಾಡಿಸಿಕೊಂಡು, ಅವರ ಅನುವು-ಆಪತ್ತುಗಳ ಕಡೆಗೆ ನೋಡುವ ಪ್ರಸಂಗ ಬಂದಾಗ ಮೋರೆ ತಿರುವುವ ಸ್ವಭಾವವು ಬಹು ಜನರಲ್ಲಿರುತ್ತದೆ. ಅಂಥವರಿಗೆ ಚುಚ್ಚುವಂತೆ ಈ ಹಾಡು ಇದೆ. ಇದಲ್ಲದೆ ಒಕ್ಕಲಿಗರ ಮನೆಯಲ್ಲಿ ದನ-ಕರುಗಳ ನೀರು-ಮೇವುಗಳ ಚಿಂತೆಯು ಮನೆಯ ಒಡತಿಗೆ ಇಲ್ಲವೆಮೋಗಬಾರದೆಂಬುವದಕ್ಕೂ ಈ ಹಾಡು ಉಪಯುಕ್ತವಾಗಿದೆ ಯೆಂದು ತೋರುತ್ತದೆ.

**ಛಂದಸ್ಸು**:—ತ್ರಿಪದಿಯ ಜಾತಿಗೆ ಸೇರಿದ್ದು.

**ಶಬ್ದ ಪ್ರಯೋಗಗಳು** :— ಮಾಗಿ=ಮಾಗಿಯ ಕಾಲದ ಎಂದರೆ ಮಾರ್ಘಮಾಸದ ನೇಗಿಲುಗೆಲಸ. ಮಾಯದಿಂದ=ಪ್ರೀತಿಯಿಂದ. ಧಂಟಿ=ದಂಟು. ತುಂಡೀನ=ಸೊಕ್ಕಿದ ಸಣಸ್ನು. ಹೆಂಡಿ=ಸೆಗಣಿ. ಕುಳ್ಳ=ಬೆರಣಿ. ಪರಸಾದ= ಧೂಪದ ಬೂದಿ (ಪ್ರಸಾದ). ಬಾರಕೋಲ=ಚಬಕ.

---

## ಮಳೀ ಹಾಡು

ಬಿತ್ತಗೆಯ ಕಾಲದಲ್ಲಿ ಮಳೆಯು ಬರುವುದಕ್ಕೆ ಬಹಳ ತಡವಾಗಹತ್ತಿ ದರೆ ಒಕ್ಕಲಿಗರಲ್ಲಿ ಹಾಹಾಕಾರವೇ ಎದ್ದುಹೋಗುತ್ತದೆ. ಪೂರ್ವಾ ಉತ್ತರಾ ಮಳೆಗಳು ಆಗಲೇಬೇಕು. ಅವು ತಪ್ಪಿದರೆ ರಂಬಾಟಕ್ಕೆ ಆರಂಭವೇ. ಹೀಗಿದ್ದು ಯಾವುದೋ ಒಂದು ವರುಷ ಸ್ವಾತಿಯ ಮಳೆಯ ವರೆಗೆ ಒಂದು ಹನಿ ಕೂಡ ಬೀಳಲಿಲ್ಲವಂತೆ. ಹೀಗೆ ಆದಾಗಲೆಲ್ಲ ಎಲ್ಲೆಲ್ಲಿಯೂ ಬರದ ಲಕ್ಷಣಗಳೇ ತೋರುತ್ತವೆ. ಇಂತಹ ಪ್ರಸಂಗದ ಒಂದು ಕರುಣಾಜನಕ ಚಿತ್ರವು ಈ ಹಾಡಿನಲ್ಲಿದೆ.

**ಛಂದಸ್ಸು** :—ತ್ರಿಪದಿಯ ಪೂರ್ವಾರ್ಧ.

**ಶಬ್ದ ಪ್ರಯೋಗಗಳು** :— ಗುಬ್ಯಾರು=ಘೋಷಾ ಪದ್ಧತಿಯ ಹೆಣ್ಣು ಮಕ್ಕಳು (ಗುಬ್ಬಿಯಂತೆ ಯಾವಾಗಲೂ ಮನೆಯಲ್ಲಿಯೆ ಇರುವವರು.) ಅನ್ಯಾದ=ಅನ್ಯಾಯದ. ಬಂದಕೇರಿ=ಬಂದುಬಿಟ್ಟು. ಉಣಿಸ್ಯಾರ=ಉಣಿಸಿದರು. ಮುಚ್ಚಾಟ್ಯಾವ=ಮುಚ್ಚಿಟ್ಟರವು.

# ಕಥೆಯ ಹಾಡುಗಳು

ರಾಜ ರಾಣಿಯರ ಕಥೆಗಳು, ಜಕಣಿಯರ ಕಥೆಗಳು ಮುಂತಾದ ಜಾನಪದ ಕಥಾಸಾಹಿತ್ಯದ ಪರಿಚಯವಿಲ್ಲದವರಾರಾದರೂ ಉಂಟೆ ? ಅಂತಹ ಕಥೆಗಳೇ ಹೆಣ್ಣುಮಕ್ಕಳ ಹಾಡುಗಳಿಗೂ ವಿಷಯವಾಗಿ ಅವರ ಜೀವನದ ರಥಕ್ಕೆ ನೆರವುಗೋಲಿನಂತೆ ಸಹಾಯಕವಾಗಿರುತ್ತವೆ. ಕೆಲಸಬೊಗಸೆ ಮಾಡುವಾಗ ಅವರು ಇಂತಹ ಕಥಾಗೀತಗಳನ್ನು ಹಾಡುತ್ತ ತಮ್ಮ ದುಡಿತದ ಶ್ರಮವನ್ನು ಮರೆಯುವರು. ಅಲ್ಲದೆ ಅವರ ಜೀವನದ ಕಷ್ಟನಷ್ಟಗಳಿಗೆ ಎದೆಗೊಡುವ ಬಲವನ್ನು ಇವುಗಳೇ ಅವರಿಗೆ ಪೂರಯಿಸುವವು. ಸದ್ಯದ ಶ್ರಮವನ್ನು ಮರೆಯಿಸುವವು. ನಾಳಿನ ಚಿಂತೆಯನ್ನು ಬಯಲು ಮಾಡುವವು. ಅದಕ್ಕೆಂತಲೇ ಇಂತಹ ಜದಪದ ಸಾಹಿತ್ಯಕ್ಕೆ ಜೀವನದ ಸಾಹಿತ್ಯವೆಂದು ಎನ್ನುವುದು. 'ಜೀವನಸಂಗೀತ' 'ಜೀವನಶ್ರುತಿ' ಮುಂತಾದ ಹೆಸರುಗಳೆಲ್ಲ ಇಂತಹ ಸಾಹಿತ್ಯಕ್ಕೇ ಸಲ್ಲತಕ್ಕವುಗಳು.

## ಆಕಳ ಹಾಡು

ಇದು ಒಂದು ಆಶ್ರಮದೊಳಗಿದ ಆಕಳ ಹಾಡು. ಅಡವಿಯಲ್ಲಿ ಮೇಯಲಿಕ್ಕೆ ಹೋದಾಗ ಹುಲಿಯ ಕೈಗೆ ಸಿಕ್ಕು—"ಮಗುವಿಗೆ ಮೊಲೆಕೊಟ್ಟು ಬರುವೆನೆ"ಂದು ಆಣೆಯಿಟ್ಟುಕೊಂಡು, ವಚನಕೊಟ್ಟಂತೆ ತಿರುಗಿ ಅದು ಹುಲಿಯ ಬಾಯಿಗೆ ತುತ್ತಾಗಲು ಹೋದ ಕಥೆ ಇದರಲ್ಲಿದೆ. ಮೊದಲನೆಯ ನುಡಿಯಲ್ಲಿ 'ತಾಯಿಯು ತಣ್ಣಗಿದ್ದರೆ ಮಗುವಿನ ಬೆನ್ನ ಮೇಲೆ ಮಹಾದೇವ' ಎಂಬ ಮಾತಿನಲ್ಲಿ ಕಥಾಸೂಚನೆಯನ್ನು ಹೇಳಿದೆ. ಮುಂದಿನ ಎರಡು ನುಡಿಗಳಲ್ಲಿ ಹಾಡು ಕೇಳಲಿಕ್ಕೆ ಬಂದವರು ಮರಳಿಹೋಗಬಾರದೆಂದು ಶಾಪವಿದೆ. ಅದರ ಮುಂದಿನ ಎರಡು ನುಡಿಗಳಲ್ಲಿ ಈಯುವ ಆಕಳಿಗೆ ಪರದೆಗಳನ್ನು ಮರೆಮಾಡಿದ

ವರ್ಣನೆಯಿದೆ. ಆ ಮೇಲಿನ ಎರಡು ನುಡಿಗಳಲ್ಲಿ ಹೆರಿಗೆಯ ವರ್ಣನೆ. ಅದರ ಮುಂದಿನ ಒಂದು ನುಡಿಯಲ್ಲಿ ಹೆರಿಗೆಯ ನಂತರದ ಕ್ರಿಯೆಯನ್ನು ಹೇಳಿದೆ. ಬಳಿಕ ನಾಲ್ಕು ನುಡಿಗಳಲ್ಲಿ ಆ ಆಕಳ ಹಾಲಿನ ಗಿಣ್ಣವನ್ನುಂಡು ನೆರೆಯ ಜನರೆಲ್ಲ ಹರಕೆಯನ್ನು ಕೊಟ್ಟ ಮಾತು ಹೇಳಿದೆ. ಮುಂದಿನ ನುಡಿಯಲ್ಲಿ ಆಶ್ರಮದ ಋಷಿಯು ಆಕಳಿಗೆ ಆರತಿಯೆತ್ತಿ ಅದನ್ನು ಅಡವಿಗೆ ಮೇಯಲು ಬಿಡುತ್ತಾನೆ. ಆ ಮೇಲಿನ ಐದುನುಡಿಗಳಲ್ಲಿ ಅಡವಿಗೆ ಹೋಗಿ ಮೇಯ್ದು ಹೊರಳಿ ಬರುವಾಗ ಹುಲಿಯ ಕೈಗೆ ಸಿಕ್ಕ ವಿಷಯವು ಹೇಳಿದೆ. ಮುಂದಿನ ಎರಡು ನುಡಿಗಳಲ್ಲಿ ಹುಲಿಗೆ ವಚನವನ್ನು ಕೊಡುತ್ತದೆ. ಆ ಮೇಲೆ ಎರಡು ನುಡಿಗಳಲ್ಲಿ ಆಕಳು ವಿಧಿಯನ್ನು ಹಳಿಯುತ್ತದೆ. ಅದರ ಮುಂದಿನ ಮೂರು ನುಡಿಗಳಲ್ಲಿ ಜೊತೆ ಆಕಳುಗಳಿಗೆ ತನ್ನ ಪರದೇಶಿ ಮಗನ ಮೇಲೆ ಲಕ್ಷ್ಯವಿರಲೆಂದು ಬಿನ್ನವಿಸಿ ಕೊಳ್ಳುತ್ತದೆ. ಮುಂದಿನ ಮೂರು ನುಡಿಗಳಲ್ಲಿ ತನ್ನ ಮಗುವಿಗೆ ಬುದ್ಧಿವಾದ ವನ್ನು ಹೇಳುತ್ತದೆ. ಕೊನೆಯ ನಾಲ್ಕು ನುಡಿಗಳಲ್ಲಿ ಕಥಾಪರಿಸಮಾಪ್ತಿ ಯಾಗುತ್ತದೆ.

**ಶಬ್ದಪ್ರಯೋಗಗಳು :**—ತಂಗಾಲಿ=ತಣ್ಣಗಿರಲಿ ( ? ). ನಿರವೀರ=ನಿಲ ವಿನ (?) ಪಟ್ಟೋಳಿ ಗುಡಿ=ರೇಶಿಮೆಯ ಪರದೆ. ಬವಲಿ=ಕಪಿಲೆ ( ಆಕಳು ). ರೊಕ್ಕಸ್ತ=ಬೆಲೆಯುಳ್ಳ. ಉಚ್ಚ್ಯಾಯ=ಉತ್ಸವ. ದಡ್ಡಿ=ದನಗಳ ಹಕ್ಕೆ. ಗೌವ ಳರು=ದನಗಾಹಿಗಳು. ಬರದ ಬತ್ತಿಸಿದಂತಾ=ಚಿತ್ರದಂತೆ ಸುಂದರವಾದ. ಹಿಮ್ಮಲಿ=ಹಿಮ್ಮೊಲೆ. ಕೆಲಕೂತ=ತೂಗಾಡಿಸುತ್ತ. ಪರದಕ್ಷದಿಂದ=ಗಂಭೀರ ವಾಗಿ. ಬಳಲ್ದೀವಿ=ಬಳಲಿದವಳು. ಬಾವಂಜಿ=ಒಂದು ಬಗೆಯ ಗಿಡಗಂಟಿ. ಇದಿ=ವಿಧಿ. ಬಂದೀನು=ಬಂದೇನು. ತನವಿನಲ್ಲಿ=ತಂಪಿನಲ್ಲಿ. ಅರಬಕ್ಷಿ ಪರಬಕ್ಷಿ= ಬುದ್ಧಿ ಬಲಿಯದ. ಮಲೆಗೊಳ್ಳ=ವೋಲೆಗೊಡಿರಿ. ಛಾಯದಲೆ=ಒಪ್ಪಿನಿಂದ. ದಾವುಣಿ=ಗೋದಲೆ (ಮೇವಿನ ಹರಿ). ಕುಣಕಿ ಸಡಲ್ಯಾವ=ಕಟ್ಟುವ ಹಗ್ಗಕ್ಕೆ ಎರವಾದೀ, ಎಂದರೆ ಸತ್ತೀ ಎಂದರ್ಥ. ಅನ್ಯಾವನಾಡದೆ=ಮರುಮಾತು ಹೇಳದೆ. ಉಪ್ವಾಸ=ಉಪವಾಸ.

---

# ಎಳ್ಳಾವಮಾಸೀ ಹಾಡು

ಒಬ್ಬ ಶ್ರೀಮಂತನಿಗೆ ಏಳು ಮಂದಿ ಸೊಸೆಯಂದಿರಿರುತ್ತಾರೆ. ಹಿರಿಸೊಸೆಯರಿಗೂ ಅತ್ತೆಗೂ ಬಹಳ ಹಿತವಿತ್ತು. ಅವರೆಲ್ಲರು ಕೂಡಿ ಚಿಕ್ಕ ಸೊಸೆಯನ್ನು ಒಂಟಿಯನ್ನಾಗಿ ಮಾಡಿ ಕಾಡುತ್ತಿದ್ದರು. ಮಾರ್ಗಶೀರ್ಷ ಮಾಸದ ಕೊನೆಗೆ ಬರುವ ಎಳ್ಳವಮಾಸಿಯ ಕಾಲಕ್ಕೆ ಜನರು ವನಭೋಜನಕ್ಕೆ ಹೋಗುವ ರೂಢಿಯುಂಟು. ಅಂದು ಮನೆಯವರೆಲ್ಲರು ಚಿಕ್ಕ ಸೊಸೆಗೆ ಮನೆಗೆಲಸವನ್ನು ನಿಯಮಿಸಿ ವನಭೋಜನಕ್ಕೆ ಹೋದರು. ಮನೆಯಲ್ಲಿ ಅವಳು ಆಕಳ ಕರುವನ್ನು ಬಿಚ್ಚಿ ಕಟ್ಟುವಷ್ಟರಲ್ಲಿ ಅದು ಕೊಸರಿಕೊಂಡು ಬೀದಿಗೆ ಹೋಯಿತು. ಅದನ್ನು ಬೆನ್ನಟ್ಟಿ ಹೋದಾಗ ಮತ್ತೊಬ್ಬ ಶ್ರೀಮಂತನ ಮಗನ ದೃಷ್ಟಿಯು ಅವಳ ಮೇಲೆ ಬಿತ್ತು. ಅವಳ ಚಿಂತೆಯಲ್ಲಿ ಅವನು, ತನ್ನ ಮನೆಗೆ ಹೋಗಿ ಮಲಗಿಕೊಂಡನು. ಅವನ ತಾಯಿ ಕೇಳಿದಾಗ ನಡೆದ ಸಂಗತಿಯನ್ನೆಲ್ಲ ಹೇಳಿದನು ( ನುಡಿ ೧-೧೫ ). ಅವನ ತಾಯಿಯು ಆ ದಿನ ಸಂಜೆಗೆ ಆ ಹೆಣ್ಣಿನ ಮನೆಯ ಏಳೂ ಮಂದಿ ಸೊಸೆಯಂದಿರಿಗೆ ಮುತ್ತೈದೆತನದ ಊಟಕ್ಕೆ ನಿಮಂತ್ರಣವನ್ನು ಕೊಟ್ಟಳು. ಚಿಕ್ಕವಳ ಭೋಜನ ಪದಾರ್ಥದಲ್ಲಿ ಬೇಕೆಂತಲೇ ಒಂದು ನೊಣವನ್ನು ಹಾಕಿದ್ದರು. ಅದರಿಂದ ಅವಳಿಗೆ ವಾಂತಿಯಾಗಹತ್ತಿತು. ಆ ನೆವನದಿಂದ ಅವಳನ್ನು ಆ ರಾತ್ರಿಯ ಮಟ್ಟಿಗೆ ತಮ್ಮ ಮನೆಯಲ್ಲಿಟ್ಟುಕೊಂಡು ಉಳಿದವರನ್ನು ಅವರ ಮನೆಗೆ ಕಳಿಸುವರು (೧೬-೧೯). ನಡುರಾತ್ರಿಯಲ್ಲಿ ಆ ತರುಣನು ಆಕೆಯ ಮೈಮುಟ್ಟ ಹೋಗುವನು. ಆಗ ಅವಳು ಒಂದು ಹಂಚಿಕೆಯನ್ನು ಮಾಡುವಳು. ತನ್ನ ಕೊರಳೊಳಗಿನ ಆಭರಣವನ್ನು ಹರಿದೊಗೆದು ಅವುಗಳನ್ನೆಲ್ಲ ಪೋಣಿಸಿಕೊಡಲು ಹೇಳುವಳು. ಅವನು ಮುಂದೆ ಮುಂದೆ ಪೋಣಿಸುತ್ತಿದ್ದಾಗ ಅವಳು ಮರೆಮಾತಿಗೆ ಹಾಕಿ ಹಿಂದೆ ಹಿಂದೆ ಅವುಗಳನ್ನೆಲ್ಲ ಉಚ್ಚುತ್ತಬಂದಳು. ಇಷ್ಟೊತ್ತಿಗೆ ಬೆಳಗಾಯಿತು (೨೦-೨೪). ಆಗ ಲಘುಶಂಕೆಯ ನೆವನಮಾಡಿ ಬಾಗಿಲ ತೆರೆಯಹೇಳುವಳು. ಅವನು ತಿರುಗಿ ಬರುವುದಕ್ಕೆ ಆಣೆಮಾಡೆಂದನು. ಅವಳು ತನ್ನ ಸೀರೆಯ ಸೆರಗನ್ನೇ ಅವನ ಕೈಯಲ್ಲಿ ಕೊಟ್ಟು ಸಂಶಯಬಾರದಂತೆ ಮಾಡಿ, ಒಂದೊಂದು ನಿಲಗಿ ( ನಿರಿಗೆ)

ಯನ್ನು ಉಚ್ಚುತ್ತ ಒಂದೊಂದು ಮೆಟ್ಟಲನ್ನು ಇಳಿದು ಕೊನೆಗೆ ಅಂಗಳದಲ್ಲಿದ್ದ ಎಮ್ಮೆಯ ಕೋಡಿಗೆ ಸೀರೆಯ ಮತ್ತೊಂದು ತುದಿಯನ್ನು ಸಿಕ್ಕಿಸಿ ಬತ್ತಲೆಯಾಗಿಯೇ ತನ್ನ ಮನೆಗೆ ಹೋದಳು (೨೫-೩೧). ನಸುಕಿನಲ್ಲಿ ಮನೆಗೆ ಹೋಗಿ ಬಾಗಿಲ ತೆರೆಯಿರೆಂದಾಗ ಅತ್ತೆಯು ಹೆದರಿಕೊಂಡಳು. ಆದರೆ ಮುಂದೆ ನಿಜಸಂಗತಿಯು ಗೊತ್ತಾಯಿತು (೩೨-೩೪). ಕೊನೆಯ ಎರಡು ನುಡಿಗಳಲ್ಲಿ "ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ" ಎಂಬ ಉಪಸಂಹಾರವಿದೆ. ಜನರೂಢಿಯ ಕಥೆಯಲ್ಲಿ ಇನ್ನೂ ಸ್ವಲ್ಪ ಹೆಚ್ಚಿನ ಭಾಗಗಳಿವೆ.

**ಛಂದಸ್ಸು:**— ಲಲಿತರಗಳೆಗೆ ಸಮೀಪವಾಗಿದೆ.

**ಶಬ್ದಪ್ರಯೋಗಗಳು:**—ಕಾಯಿಪಲ್ಲೆ=ತರಕಾರಿ. ಜ್ವಾಳಿ=ಬೋಕಿ. ಕಟ್ಟೆಟಿಗೆ=ಕಟ್ಟೆವಸ್ತ್ರದಲ್ಲಿ. ನಣ=ನೋಣ. ನಟ್ಟನಡರಾತ್ರ = ನಡುರಾತ್ರಿ. ಹಿಂದಕ-ಮುಂದಕ=ವಾಂತಿ. ದಿಕಪಾಲ=ಚೆಲ್ಲಾಪಿಲ್ಲಿ. ಕಾಲ್ಮಡಿ=ಮೂತ್ರ. ಪಾಟಣಗಿ=ಮೆಟ್ಟಲು.

- - -

# ಅಕ್ಕ ಮಹಾದೇವಿಯ ಹಾಡು

ಹೆಣ್ಣುಮಕ್ಕಳು ಈ ಹಾಡಿಗೆ 'ಜೈನರ ಹಾಡು' ಎಂದು ಎನ್ನುತ್ತಾರೆ. ಆದರೆ ಇದರ ಕಥೆಯು ಅಕ್ಕ ಮಹಾದೇವಿಯ ಕಥೆಯೊಡನೆ ಬಹಳವಾಗಿ ಹೋಲುತ್ತಿರುವುದರಿಂದ ನಾವು ಇದಕ್ಕೆ ಮೇಲ್ಕಂಡ ಹೆಸರನ್ನು ಕೊಟ್ಟಿದ್ದೇವೆ. ನಮ್ಮ ಊಹೆಯು ಬಹಳ ಮಟ್ಟಿಗೆ ಸರಿಯಾಗಿದೆಯೆಂದು ತೋರುತ್ತದೆ. ಹಾಗಿದ್ದುದಾದರೆ ಈ ಹಾಡಿಗೆ ಐತಿಹಾಸಿಕ ಮಹತ್ವವು ಅತಿಶಯವಾಗಿ ಉಂಟು.

ಮಗಳು ಮತ್ತು ತಾಯಿ ಇವರಿಬ್ಬರ ಸಂವಾದವಿದು. ತಾಯಿಯ ತವರವರು ಜೈನರು. ಕೊಟ್ಟ ಮನೆ ಲಿಂಗವಂತರದು. ತಾಯಿಯು ತನ್ನ ಸೋದರನಿಗೆ ಮಗಳನ್ನು ಕೊಡಲೆಳಸುತ್ತಾಳೆ. ಅದಕ್ಕೆ ಅವಳು ಒಪ್ಪುವುದಿಲ್ಲ. ತಾಯಿಯ ಸೋದರನು ತನ್ನೂರ ಒಡೆಯನೆಂದು ಹೇಳಲಾಗಿದೆ (೧-೪). ಮಗಳ ಒಪ್ಪಿಗೆ ಇಲ್ಲದಿದ್ದರೂ ಮನೆಯಲ್ಲಿ ಲಗ್ನದ ಸಾಹಿತ್ಯಕ್ಕೆ ಆರಂಭವಾಗು

ತ್ತದೆ. ಅದನ್ನೆಲ್ಲ ಅವಳು ತಿರಸ್ಕರಿಸುತ್ತಲೇ ಇರುತ್ತಾಳೆ(೫-೮). ಲಗ್ನದ ಸಂಭ್ರಮಕ್ಕೆಂದು ವರನ ಊರಿನಿಂದ ನಿಬ್ಬಣವು ಹೊರಡುತ್ತದೆ. ಇತ್ತ ತಾಯಿಯು ಉಬ್ಬಿನಿಂದ ಮಗಳನ್ನು ಶೃಂಗರಿಸಲೆಳಸುತ್ತಾಳೆ. ಅದಕ್ಕೆ ಅವ ಳೊಪ್ಪುವುದಿಲ್ಲ( ೯-೧೮ ). ಕೊನೆಗೆ ವರನು ವೈಭವದಿಂದ ಮನೆಯ ಬಾಗಿ ಲಿಗೆ ಬಂದಾಗ ಕನ್ನೆಯು ಶಪಿಸುತ್ತಾಳೆ (೧೯-೨೨). ಅಂತೂ ಒತ್ತಾಯದಿಂದ ಅವಳ ಮದುವೆ ಮುಗಿಯುವುದೆಂದು ತೋರುತ್ತದೆ. ಹಾಡಿನಲ್ಲಿ ಈ ಮಾತಿನ ಬಗೆಗೆ ಏನೂ ಉಲ್ಲೇಖವಿಲ್ಲ. ನಂತರ ತಾಯಿಯ ತವರುಮನೆಯಿಂದ ಬಂದ ಬುತ್ತಿಯ ಊಟದ ಸಲುವಾಗಿ ತಾಯಿಮಕ್ಕಳಲ್ಲಿ ವಾಗ್ವಾದವಾಗುತ್ತದೆ. ಮಗಳನ್ನು ಗಂಡನ ಮನೆಗೆ ಕಳಿಸುವಾಗ ಬುತ್ತಿಗೆ ಬದಲು ಹಿಟ್ಟು, ಅಕ್ಕಿ ಮುಂತಾದ ಒಣ ಜೀನಸುಗಳನ್ನು ಕಟ್ಟಿಕೊಡುತ್ತಾರೆ. ಕನ್ನೆಯು ಆ ಸಾಹಿತ್ಯ ವನ್ನೆಲ್ಲ , ತೆಗೆದುಕೊಂಡು ಒಂದು ದೇವಾಲಯದಲ್ಲಿ ಹೋದವಳು ಅಲ್ಲಿಯೇ ಮಟ್ಟಮರೆಯಾಗಿಬಿಡುತ್ತಾಳೆ. ಇದರ ಮುಂದೆ ಅವಳ ಸಮಾಚಾರವೇ ಯಾರಿಗೂ ಗೊತ್ತಾಗುವುದಿಲ್ಲ ( ೨೩-೨೯ ).

**ಛಂದಸ್ಸು**:— ತ್ರಿಪದಿಗೆ ಸಮೀಪವಾಗಿದೆ.

**ಶಬ್ದ ಪ್ರಯೋಗಗಳು**:—ಅಂಕಬಂಕ=ಸೊಟ್ಟಪಟ್ಟ. ಡೊಂಕ=ವಕ್ರ. ಸೈದಾನ=ಸವಿಜೀನಸು. ಸತ್ತದಿನ=ಉತ್ತರಕ್ರಿಯೆ. ನಿಬ್ಬಣ=ಲಗ್ನಕ್ಕೆ ಬಂದ ಬೀಗರ ಗುಂಪು. ಬಣ್ಣದಲ್ಲಿ=ಒಪ್ಪಿನಿಂದ. ಖೋಡಿ=ಕೆಟ್ಟ ( ಅವಲಕ್ಷಣ ). ಛಿಜ್ಜಿ=ಸಜ್ಜೆಯ ಜೆಳೆ. ಛೆಲ್ಯಾಡು=ಹರಚೆಲ್ಲು. ಒತ್ತಾಡು=ತಾಕಲಾಡು. ಸೋಬಾನ=ಶೋಭನ. ಬಗಸುಳ್ಳ=ಬಲವುಳ್ಳ ( ಗಟ್ಟಿಗನಾದ ). ತಳವಾರ= ಅಗಸೆಯ ಕಾವಲುಗಾರ. ಕಾಲಮ್ಯಾಲಾಗಲಿ=ಸಾಯಲಿ.

---

# ಬರದ ಹಾಡು

ಇಬ್ಬರು ಅಣ್ಣತಮ್ಮಂದಿರಿರುತ್ತಾರೆ. ಅಣ್ಣ ಶ್ರೀಮಂತ, ತಮ್ಮ ಬಡವ. ಅಣ್ಣನಿಗೆ ಮಕ್ಕಳಿಲ್ಲ, ತಮ್ಮನಿಗೆ ಬಹಳ ಮಕ್ಕಳು. ತಮ್ಮನು ಅಣ್ಣನಿಗೆ "ಒಂದು ಪಡಿಜೋಳವನ್ನು ಕಡವಾಗಿ ಕೊಡು, ನಿನ್ನ ಹೊಲದಲ್ಲಿ ಕೆಲಸವನ್ನು

ಮಾಡುವೆನು" ಎಂದನು. ಆ ಮಾತಿಗೆ ಅಣ್ಣನು ಒಪ್ಪಿ ಅದರಂತೆ ಮಾಡಿದನು. ತಮ್ಮನ ಹೆಂಡತಿಯು ಆ ಜೋಳವನ್ನು ತನ್ನ ಮನೆಯಲ್ಲಿ ಒಡೆಯುತ್ತಿದ್ದಾಗ ಭಾವನ ಹೆಂಡತಿಯು ಬಂದು ಅವು ತಮ್ಮ ಜೋಳವೆಂದು ಗುರುತಿಸಿ ಸುಚ್ಚಿನ ಗಡಿಗೆಯನ್ನು ಒಡೆದು ಇದ್ದ ಜೋಳವನ್ನು ತೆಗೆದುಕೊಂಡು ಹೋಗುತ್ತಾಳೆ. ಮೇಲೆ ಬಡವನ ಹೆಂಡತಿಯು ತನ್ನ ಎಂಟೂ ಮಕ್ಕಳನ್ನು ಕರೆದು ಕೊಂಡು ತವರುಮನೆಗೆ ಹೋಗುತ್ತಾಳೆ. ಅಲ್ಲಿ ತನ್ನ ಅಣ್ಣನ ಹೆಂಡತಿಗೆ ಒಂದು ಸೇರು ಜೋಳವನ್ನು ಕಡ ಬೇಡುತ್ತಾಳೆ. ಕೊಡದಿರಲು ಹುಡುಗರಿಗೆ ತುತ್ತು ರೊಟ್ಟಿಯಾದರೂ ಕೊಡೆಂದು ಕೇಳಿದಾಗ "ತುತ್ತು ರೊಟ್ಟೀ ಬೇಡಲಿಕ್ಕೆ ಬಿಕ್ಕೆಗೆ ಬಂದಿದ್ದಿಯಾ ?" ಎಂದು ಅತ್ತಿಗೆಯು ಎನ್ನುವಳು. ನಂತರ ಬಡವಿಯು ಅಂಗಡಿಗೆ ಹೋಗಿ ಕೊರಳಲ್ಲಿಯ ತಾಳಿಯನ್ನು ಕೊಟ್ಟು ವಿಷವನ್ನೂ ಅಕ್ಕಿಯನ್ನೂ ಕೊಂಡುತರುವಳು. ವಿಷಹಾಕಿ ಮಾಡಿದ ಬೋನವನ್ನು ಮಕ್ಕಳೊಡನೆ ಆ ಗಂಡಹೆಂಡರು ಉಣ್ಣುವರು. ಉಂಡು ಬರವನ್ನು ಶಪಿಸುತ್ತ ಬಾಗಿಲಿಕ್ಕಿಕೊಂಡು ಮಲಗಿಬಿಡುವರು. ಮಲ್ಲಾಡಕ್ಕೆ ಹೋದ ಆಕೆಯ ಅಣ್ಣನು ತಿರುಗಿಬಂದು ತಂಗಿಯ ಸುದ್ದಿಯನ್ನು ಕೇಳಿದಾಗ ಅವನ ತಾಯಿಯು ಎಲ್ಲವನ್ನೂ ಹೇಳುವಳು. ಅದನ್ನು ಕೇಳಿ, ಕೆಡಕೆನಿಸಿ ತಂಗಿಯ ಮನೆಗೆ ಬರುವರು ಬಂದು ನೋಡಿ ತನ್ನ ಜೀವವನ್ನು ಇಟ್ಟುಕೊಳ್ಳುವುದಕ್ಕೆ ಹೇಸಿ ತಾನೂ ಅವರೊಡನೆ ಸಾಯುತ್ತಾನೆ.

**ಛಂದಸ್ಸು:**—ಸಾಂಗತ್ಯಕ್ಕೆ ಸಮೀಪವಾಗಿದೆ.

**ಶಬ್ದಪ್ರಯೋಗಗಳು:**— ಸೊಲಗಿ=ಪಡಿ ಅಥವಾ ಸೇರು. ಗಾದ ಮೆತ್ತಿಗೆ=ಕಣಜದ ಬಾಯಿಯ ಮೆತ್ತಿಗೆ. ಹೆಣತಿ=ಹೆಂಡತಿ. ಇಸಾ=ವಿಷ. ಎಡಿ= ಅಗಲ. ಪೇಟಗಟಾರ ಮಾಡಿಕೊ=ಹೊಟ್ಟೆಯಲ್ಲಿ ಕಠಾರಿಯಿಂದ ಇರಿದುಕೊ. ಅಟ್ಟು=ಅಷ್ಟು. ತುತ್ತು=ತುಣುಕು. ಅಸೂ=ಅಷ್ಟು. ಬಾನಿನಾಗ=ಬೋನದಲ್ಲಿ.

---

# ದ್ರೌಪದಿಯ ಹಾಡು

ಪಾಂಡವರು ಜೂಜಿನಲ್ಲಿ ದ್ರೌಪದಿಯನ್ನು ಸೋತಾಗ ಕೌರವರು ಅವಳ

ಸೀರೆಯನ್ನು ಸೆಳೆದ ಕತೆಯಿದು. ಇದರಲ್ಲಿ ಎಂಟನೆಯ ನುಡಿಯೊಂದನ್ನು ಬಿಟ್ಟರೆ ಉಳಿದೆಲ್ಲ ಹಾಡಿನ ಭಾವವು ಸಹಜವಾಗಿ ಲಕ್ಷ್ಯಕ್ಕೆ ಬರುವಂತಿದೆ. ಆದರೆ ಎಂಟನೆಯ ನುಡಿಯಲ್ಲಿ ಭೀಷ್ಮಾದಿಗಳನ್ನು ಕುರಿತು ದ್ರೌಪದಿಯು ಆಡಿದ ಮಾತು ಹೇಳಲ್ಪಟ್ಟಿದೆಯೋ ಏನೋ. ಹಾಗೆ ತಿಳಿದುಕೊಂಡರೆ ಅರ್ಥವು ಸುಲಭ ವಾಗುವುದು.

**ಛಂದಸ್ಸು :**—ಭೋಗಷಟ್ಪದಿ.

**ಶಬ್ದ ಪ್ರಯೋಗಗಳು :**—ಕರಿಯಪೂರ=ಹಸ್ತಿನಾವತಿ. ಫಾಶ=ಪಗಡಿ ಆಟದೊಳಗಿನ ಗಾಳುಗಳು. ಫಕೀರ=ಕಾಡುವ ಸನ್ಯಾಸಿ. ದಾರು ಮಾರು ಬದುಕು=ಸ್ಥಾವರಜಂಗಮ ಆಸ್ತಿ. ಕುಂದ್ಯಾನಾಡದಿರು=ಕುಂದಿಡಬೇಡ. ಸದರು=ಮುಖ್ಯ ಸ್ಥಳ. ರಗತ=ರಕ್ತ. ಉಡ್ಡ=ಚಬಕ. ಇಂಜಾನ=ಇಂಧನ. ಮಂಜಾನ=ಮಂಜು ( ಮಬ್ಬು )

---

## " ದಂಡ ಬಂತವ್ವ ದಂಡ "

ಪಟ್ಟಣದ ದಾರಿಯ ಮೇಲಿರುವ ಒಂದು ಊರ ಬಳಿಯಲ್ಲಿ ದಂಡು ಬಂದಿಳಿದಾಗ ಒಬ್ಬ ಹೆಣ್ಣುಮಗಳು ನೋಡಲಿಕ್ಕೆಂದು ಹೋಗಿ ಡೇರೇದ ಹತ್ತರ ನಿಂತಿದ್ದಳು. ಒಳಗೆ ಕುಳಿತ ಅಧಿಕಾರಿಯು ಅವಳ ರೂಪಕ್ಕೆ ಮರುಳಾಗಿ ಅವಳನ್ನು ಹಿಡಿದು ತರುವುದಕ್ಕೆ ಜವಾನರನ್ನು ಕಳಿಸುತ್ತಾನೆ (೧-೫). ಈ ಸುದ್ದಿಯನ್ನು ಕೇಳಿ ಅವಳ ತಾಯಿಯು ಓಡಿಬಂದು ದುಃಖಮಾಡುತ್ತಾಳೆ (೬-೮). ಆಗ ಮಗಳು ತಾಯಿಗೆ ತನ್ನ ಸುಖದುಃಖದ ಬಗ್ಗೆ ಕುರುಹುಗಳನ್ನು ಹೇಳುತ್ತಾಳೆ ( ೯-೧೦ ).

ಹೀಗೆ ಕುರುಹು ಹೇಳುವ ಪದ್ಧತಿಯು ಬಹುಪ್ರಾಚೀನ ಕಾಲದ್ದು. ಘಟೋತ್ಕಚನು ತಾನು ಸತ್ತರೆ ಮನೆಯ ಮುಂದಿನ ಸಪ್ತತಾಳ ವೃಕ್ಷಗಳು ನೆಲಕ್ಕುರುಳುವವೆಂದು ತನ್ನ ತಾಯಿಗೆ ಕುರುಹನ್ನು ಹೇಳಿ ಯುದ್ಧಕ್ಕೆ ಹೋದ ಸಂಗತಿ ಸುಪ್ರಸಿದ್ಧವಿದೆಯಲ್ಲವೇ ?

**ಛಂದಸ್ಸು :**—ತ್ರಿಪದಿಯ ಪೂರ್ವಾರ್ಧ.

**ಶಬ್ದ ಪ್ರಯೋಗಗಳು :**—ಡೇರೆ=ತಂಬೂ.

# ಮದುವೆಯ ಹಾಡುಗಳು

ಈ ವಿಭಾಗವು ಹೆಣ್ಣುಮಕ್ಕಳ ಸಂಪತ್ತಿಯಿದ್ದಂತೆ. ಲಗ್ನದ ಬೇರೆಬೇರೆ ವಿಧಾನಗಳ ಪ್ರಸಂಗಗಳಲ್ಲಿ ಇವುಗಳನ್ನು ಹಾಡುವರು. ಈ ಹಾಡುಗಳು ಅವರ ಮಟ್ಟಿಗೆ ಯಜ್ಞಮಂತ್ರಗಳೇ ಸರಿ. ದಾಂಪತ್ಯವು ಜೀವನದ ಬಹುಮುಖ್ಯ ವಿಭಾಗವಾಗಿರುವುದರಿಂದ, ಅದು ಒಂದು ಮಹಾಪವಿತ್ರ ಯಜ್ಞದಂತೆ ಅವರಿಗೆ ತೋರಿದ್ದು ಆಶ್ಚರ್ಯವಲ್ಲ. ಇವು ಕೇವಲ ರಂಜನೆಯ ಹಾಡುಗಳಲ್ಲದ್ದರಿಂದ ಇವುಗಳನ್ನು ಬೇರೆ ದೃಷ್ಟಿಯಿಂದ ಓದಬೇಕು. ಆದರೆ ಇವುಗಳಲ್ಲಿ ರಸವಿಲ್ಲ ವೆಂತಲ್ಲ. ಒಂದೊಂದು ವಿಧಾನಕ್ಕೂ ಎಷ್ಟೆಷ್ಟೋ ಹಾಡುಗಳು ಸಿಕ್ಕಬಹು ದಾದರೂ, ನಾವು ಒಂದೊಂದು ಹಾಡನ್ನು ಮಾತ್ರ ಇಲ್ಲಿ ಕೊಟ್ಟಿದ್ದೇವೆ.

## ಭಾಟಗೀ ಹಾಡು

ಕನ್ಯಾಪಕ್ಷದವರೂ ವರಪಕ್ಷದವರೂ ಮೊದಲು ತಮ್ಮತಮ್ಮೊಳಗೆ ವಾಙ್ನಿಶ್ಚಯವನ್ನು ಮಾಡಿ ಕನ್ಯೆಗೆ ಕುಂಕುಮವನ್ನು ಹಚ್ಚುತ್ತಾರೆ. ಆ ಮೇಲೆ ಅವೇ ನಿಶ್ಚಯದ ಮಾತುಗಳನ್ನು ಸರ್ವಜನಸಾಕ್ಷಿಯಾಗಿ ಗಟ್ಟಿ ಮಾಡುತ್ತಾರೆ. ಆ ಕಾಲದ ನೈಮಿತ್ತಿಕ ಕಾರ್ಯಕ್ಕೆ .ಭಾಟಗೆ ಅಥವಾ ಭಾಷ್ಟಿಗೆ ಹಾಕುವುದು ಎನ್ನುವರು. ಇದು ಆ ಪ್ರಸಂಗದ ಹಾಡು. ಇದರಲ್ಲಿ ಮೂರನೆಯ ನುಡಿಯ ಹೊರತು ಉಳಿದೆಲ್ಲ ಹಾಡು ಸಹಜವಾಗಿ ತಿಳಿಯು ವಂತಿದೆ. ಮೂರನೆಯ ನುಡಿಯಲ್ಲಿ ಹೇಳಿರುವುದೇನಂದರೆ, ಮೇಲುಪ್ಪರಿಗೆಯ ಮೇಲ್ಮನೆಯಲ್ಲಿ ಕುಳಿತು ಮದುವೆಯ ಮಾತನ್ನಾಡುತ್ತಿರುವಾಗ, ಆ ಮೇಲ ಟ್ಟಕ್ಕಿಂತ ತೀರ ಕೆಳಕ್ಕಿರುವ ಜೋಡು ಮಾವಿನ ಮರಗಳ ತುದಿಯ ಮೇಲೆ ಕುಳಿತ ಜೋಡೆರಡು ಹಕ್ಕಿಗಳು ಶುಭಶಕುನವನ್ನು ನುಡಿಯುತ್ತವೆ.

**ಛಂದಸ್ಸು** :—ತ್ರಿಪದಿ.

**ಶಬ್ದಪ್ರಯೋಗಗಳು** :— ಹ್ವಾದ್ರ=ಹೋದರೆ. ಉಮ್ಮಾಯದ=ಹರು

ಷದ. ಕುಸುಮಾಯದ=ಹೂವಿನಂಥ. ಗ್ವಾಡೀಯನೀ ತೆಳಗ=ಗೋಡೆಯನೆ ಈ ತೆಳಗೆ ( ಗೋಡೆಯ ಕೆಳ ಬದಿಗೆ ). ತಟ್ಟಂದರ ತೆಳಗ=ತಟ್ಟೆತಳಕ್ಕೆ. ಆಕಳ ಕರಸಾಕ್ಷಿ=ಗಾಯತ್ರಿಯ ಸಾಕ್ಷಿಯಿಂದ. ( ಪ್ರತಿಜ್ಞಾಪೂರ್ವಕವಾಗಿ ). ಶುಕ್ರ ವಾರ, ಮಂಗಳವಾರ ಇವು ಹೆಣ್ಣುಮಕ್ಕಳ ದೃಷ್ಟಿಯಲ್ಲಿ ಮಹತ್ವದ ದಿವಸ ಗಳು.

---

## ಒಳಕಲ್ಲ ಪೂಜೀ ಹಾಡು

ಲಗ್ನಕ್ಕೆ ಬೇಕಾಗುವ ಹಿಟ್ಟಕ್ಕಿಯ ಸಾಹಿತ್ಯವನ್ನು ಸಿದ್ಧಮಾಡುವ ಕಾಲದಲ್ಲಿ ಮೊದಲಿಗೆ ಒರಳು, ಬೀಸುವಕಲ್ಲು ಮುಂತಾದವುಗಳ ಪೂಜೆ ಮಾಡಿ ಕೆಲಸವನ್ನು ಪ್ರಾರಂಭಿಸುತ್ತಾರೆ. ಆ ಪ್ರಸಂಗದ ಹಾಡಿದು.

**ಛಂದಸ್ಸು**:— ತ್ರಿಪದಿಯಾಗಿದೆ.

**ಶಬ್ದಪ್ರಯೋಗಗಳು** :— ವಳ್ಳ=ಒರಳು ಮಂಟಿಗಿ=ಕಾಲಲ್ಲಿ ಧರಿಸುವ ಒಂದು ಆಭರಣ.

---

## ಅರಿಷಿಣ ಹಚ್ಚೊ ಹಾಡು

( ೧ )

ಅರಿಷಿಣ ಹಚ್ಚುವುದು ಲಗ್ನದ ಕಾಲದಲ್ಲಿ ಪ್ರಥಮದೀಕ್ಷೆಯಂತಿರುವುದು. ವರನಿಗೆ ಅರಿಷಿಣ ಹಚ್ಚುವಾಗ ಇದನ್ನು ಹಾಡುತ್ತಾರೆ. ಆಗ ಮುತ್ತೈದೆಯರು ನೆರೆದು ಹಾಡುತ್ತ, ವರನ ತಲೆಗೆ ವೀಳ್ಯದ ಎಲೆಯಿಂದ ಎಣ್ಣೆಯನ್ನು ಹಚ್ಚಿ, ಮೈಗೆ ಅರಿಷಿಣವನ್ನು ಬಳಿದು, ಸ್ನಾನ ಮಾಡಿಸುವರು.

**ಛಂದಸ್ಸು**:—ತ್ರಿಪದಿಯ ಪೂರ್ವಾರ್ಧ.

**ಶಬ್ದಪ್ರಯೋಗಗಳು**:— ನಮ ಶಿವಗ=ನಮ್ಮ ಮದುಮಗನಿಗೆ. ನೆಯ್ಯೆಣ್ಣೆ=ಸ್ನಿಗ್ಧವಾದ ಎಣ್ಣೆ. ಹಚ್ಚೊಟಿಗೆ=ಹಚ್ಚುವಷ್ಟರಲ್ಲಿ. ತ್ವಾಟ=ತೋಟ. ಎಲಿ=ವೀಳ್ಯದ ಎಲೆ. ನೀರ್ಯಾಕನಾಗ್ಯಾವ=ನೀರೇಕೆ ಆಗಿವೆ.

---

# ಅರಿಷಿಣ ಹಚ್ಚೊ ಹಾಡು

( ೨ )

ಕನ್ಯೆಗೆ ಅರಿಷಿಣ ಹಚ್ಚುವ ವಿಧಾನದ ಹಾಡಿದು.

**ಛಂದಸ್ಸು:**— ತ್ರಿಪದಿ.

**ಶಬ್ದ ಪ್ರಯೋಗಗಳು:**— ಕುರುಣಿ=ಮುಡಿಗೆ ಬಿಗಿಯುವ ಉಣ್ಣೆಯ ದಾರ. ಹಂಚಗೂಣಿ=ಹಚ್ಚಗಿನ ಕುರುಣೆ. ಬೆಂಚ (ಕೆಂಚ) ಗೂಣಿ-ಕೆಂಪು ಬಣ್ಣದ ಕುರುಣಿ. ನಾಗುರುಣಿ=ನಾಗರ ಹಾವಿನಂತೆ ಜೋಲುವ ಕುರುಣೆ (ಇದು ಒಂದು ಆಭರಣವಾಗಿರಲೂ ಬಹುದು). ಕುಸುವಲ್ಲಿ=ಹೂವಿನಂಥವಳು. ಭೂದೇವಿ=ಮದುಮಗಳು. ಚಿಲಕ=ತಿಲಕ. ಕೆಂಚ್ಯಾರು=ಕೆಂಪುಮೈಯವರು. ಲ್ಯಾವಳ=ಗೋಪು.

---

# ಐರಾಣಿಯ ಹಾಡು

ಲಗ್ನ ಸಮಾರಂಭದ ಎರಡನೆಯ ದಿನದ ವಿಧಾನವಿದು. ಐದು ಮಂದಿ ಮುತ್ತೈದೆಯರು, ಕುಂಬಾರನ ಮನೆಯಿಂದ ಹೊಸ ಕೊಡಗಳನ್ನು ತಂದು ನೀರು ತುಂಬಿಕೊಂಡು ಬರುವರು. ಆಗಿನ ಹಾಡಿದು.

**ಛಂದಸ್ಸು:**— ತ್ರಿಪದಿ.

**ಶಬ್ದ ಪ್ರಯೋಗಗಳು:**— ಐರಾಣಿ-ಐದುಮಂದಿ ರಾಣಿಯರು ಹೊರುವ ಕೊಡ ಮತ್ತು ಮಗಿಗಳ ಸಮೂಹ.

---

# ಸಂಡಿಗೆ ಕಡಿಯುವ ಹಾಡು

ಐರಾಣಿಯನ್ನು ತಂದ ಮೇಲೆ ಮುತ್ತೈದೆಯರು, ಒಂದು ಮಡಿಬಟ್ಟೆಯ ಮೇಲೆ ನಂದಿಯ ಮೂರ್ತಿಯೊಂದನ್ನು ಇಟ್ಟು, ಕಡಲೆಯ ಹಿಟ್ಟಿನ ಮುದ್ದೆಯನ್ನು ಕೈಯಲ್ಲಿ ಹಿಡಿದು, ದುಂಡುದುಂಡು ಗುಳಿಗೆಗಳನ್ನು ಮಾಡಿ ಆ ಮೂರ್ತಿಯ ಮೇಲೆ ಮಳೆಗರೆದಂತೆ ಎಸೆಯುವರು. ಆ ಕಾರಣದಿಂದಲೇ

ಈ ದಿನದ ವಿಧಾನಕ್ಕೆ "ನಂದಮಾಕ (ನಂದಿಮುಖ)"ದ ದಿವಸವೆನ್ನುವರು. ಈ ಸಂಬಂಧದ ಹಾಡು ಇದು.

**ಶಬ್ದಪ್ರಯೋಗಗಳು:**—ಒಡ್ಡಿ=ಒಡ್ಡುಳ್ಳ (ಐಸಿರಿಯ). ಪುರವಂತ ನಾಡು=ದೇವರ ಮುಂದೆ ವೀರಕುಣಿತವನ್ನು ಕುಣಿಯುವುದು. ಹಡದಿ=ಮಡಿ ಬಟ್ಟೆ. ಖನ್ನಿ=ಕನ್ಯೆ. ಅಬ್ಬರಣಿ=ಆರ್ಭಟ. ಬಿದುರಿನ ಮಳೆ=ಬಿರುಮಳೆ. ಸಮ ರಮ=ಸಂಭ್ರಮ.

---

# ನೂಲು ಸುತ್ತುವ ಹಾಡು

ಲಗ್ನದಲ್ಲಿ ವಿಧಿಪೂರ್ವಕವಾಗಿ ಸ್ನಾನಮಾಡಿಸುವ ಪ್ರಸಂಗಗಳು ಎರಡು ಸಾರೆ ಬರುತ್ತವೆ. ಒಮ್ಮೆ ಅರಿಷಿಣ ಹಚ್ಚುವಾಗ; ಇನ್ನೊಮ್ಮೆ ಅಕ್ಷತೆಯ ಕಾಲಕ್ಕೆ. ಆಗ ನಾಲ್ಕು ಮೂಲೆಗೆ ನಾಲ್ಕು ತಂಬಿಗೆಗಳನ್ನಿಟ್ಟು, ಅವುಗಳ ಸುತ್ತುಮುತ್ತು ಮೇರೆಯಂತೆ ನೂಲು ಸುತ್ತಿ, ನಟ್ಟನಡುವೆ ಮಣೆಗಳನ್ನಿಟ್ಟು ಮದುಮಕ್ಕಳಿಗೆ ಎರೆಯುತ್ತಾರೆ. ಆಗಿನ ಕಾಲಕ್ಕೆ ನೂಲು ಸುತ್ತುವ ಹಾಡಿದು.

**ಛಂದಸ್ಸು:**— ತ್ರಿಪದಿ.

**ಶಬ್ದಪ್ರಯೋಗಗಳು:**—ಖಂಡಿಕಿ=ನೂಲಿನ ಕುಕ್ಕಡಿ. ಹಸನ= ಸ್ವಚ್ಛ. ಅಲ್ಲ್ಲ ಮತ್ತು ಗಿಲ್ಲ್ಲ=ನೀರಿನ ಸಪ್ಪಳ.

---

# ಅಡಿಕೆ ಆಡುವ ಹಾಡು

ವಧುವರರಿಗೆ ಸರ್ವಜನರು ಕೂಡಿ ಅಕ್ಕೀಕಾಳು (ಅಕ್ಷತೆ) ಒಗೆದ ಮೇಲೆ ತುಸು ಹೊತ್ತಿನಲ್ಲಿ ಅವರಿಂದ ನಗೆಯಾಟವನ್ನು ಆಡಿಸುತ್ತಾರೆ. ಆಗ ಒಬ್ಬರು ಅಡಿಕೆಯನ್ನು ಗಟ್ಟಿಯಾಗಿ ಹಿಡಿಯಬೇಕು; ಇನ್ನೊಬ್ಬರು ಅದನ್ನು ಬಿಡಿಸಿಕೊಳ್ಳಬೇಕು. ಆಗ ಸುತ್ತಮುತ್ತಲಿನ ಹೆಣ್ಣುಮಕ್ಕಳು ಈ ಹಾಡನ್ನು ಹಾಡುವರು.

**ಛಂದಸ್ಸು:**—ತ್ರಿಪದಿ.

**ಶಬ್ದ ಪ್ರಯೋಗಗಳು**:—ಐದು ಅಕ್ಷರ=ಶಿವಪಾರ್ವತಿ ಎಂಬ ಐದು ಅಕ್ಷರಗಳಾಗಿರಬಹುದು. ಮಲ್ಲಿಗ್ಹೂವಿನ ಕ್ರಮದಿಂದ= (ಅಡಿಗಳು) ಮಲ್ಲಿಗೆಯಂತೆ ಮೃದುವಾಗಿವೆಯೆಂದು ಭಾವಿಸಿ. ಪಾದಲಿ=ಪಾದದಲ್ಲಿ. ಪದಮ=ಪದ್ಮಚಿಹ್ನ. ಬಲಬಂದು=ಬಲವು ಬರಲಿ. ಬಟ್ಟಲಿ=ಬೆರಳಲ್ಲಿ. ಒಂಕಿ=ತೋಳಿನ ಆಭರಣ. ಸರಗಿ=ಕೊರಳಿನ ಆಭರಣ. ಕಾಯಾಂಗ=ಕಾಯಿಯಂತೆ. ಭಾಗ=ಸ್ಥಳ.

---

# ಭೂಮದ ಹಾಡು

" ಭೂಮ "ವೆಂಬ ಶಬ್ದಕ್ಕೆ ಸಂಸ್ಕೃತದಲ್ಲಿ " ಸರ್ವವನ್ನೊಳಗೊಂಡದ್ದು "ಎಂಬರ್ಥವಿದೆ. " ಭೂಮ " ಎಂದರೆ ಖಂಡರಹಿತವಾದದ್ದು. " ಖಂಡದಲ್ಲಿ ಸುಖವಿಲ್ಲ, ಅಖಂಡದಲ್ಲಿ ಸುಖವಿದೆ " ಎಂಬರ್ಥದ ಉಪನಿಷದ್ವಾಕ್ಯವೊಂದು ಸರ್ವಶ್ರುತವೇ ಇದೆ. " ಬಿಡಿಯಲ್ಲಿ ಸುಖವಿಲ್ಲ, ಇಡಿಯಲ್ಲ ಸುಖವಿದೆ " ಎಂದು ಅದರ ಅರ್ಥ.

ಅಕ್ಷತೆ ಬಿದ್ದಮೇಲೆ, ಮತ್ತು ಮೆರವಣಿಗೆ ಮುಗಿದ ಮೇಲೆ, ಹೀಗೆ ಎರಡು ಸಾರೆ ಈ " ಭೂಮದ " ವಿಧಾನವು ಜರುಗಿಸಲ್ಪಡುತ್ತದೆ. " ಭೂಮ "ವೆಂದರೆ ಒಂದು ರೀತಿಯಿಂದ ಲಗ್ನಶಾಂತಿಯ ಮಹಾನೈವೇದ್ಯ (ಬಡಿವಾಣ) ವೆಂದು ಹೇಳಬಹುದು. ಸರ್ವವಿಧದ ಪಕ್ವಾನ್ನಗಳನ್ನು ಮದುಮಕ್ಕಳ ಮುಂದೆ ಹೊಸದುರುಡಿ( ಬಿದುರಿನ ಬುಟ್ಟಿ )ಯ ಕೆಳಗೆ ಮುಚ್ಚಿ ಇಟ್ಟು ಮುತ್ತೈದೆಯರು ಮತ್ತು ವಿವಾಹಿತ ಪುರುಷರು ಅದನ್ನು ತೆರೆದು ಉಣ್ಣುವರು. ಮೊದಲನೆಯ ಭೂಮ ಹೆಣ್ಣುಮಕ್ಕಳದು. ಎರಡನೆಯದು ಗಂಡಸರದು.

ಇದರಲ್ಲಿ ಸರ್ವಭೋಜನಪದಾರ್ಥಗಳ ಸಮಾವೇಶವಿರುವುದರ ಅರ್ಥವು ದಂಪತಿಗಳ ಸಾಂಸಾರಿಕ ಜೀವನದಲ್ಲಿ ಬರತಕ್ಕ ಸರ್ವವಿಧದ ಸಂಗತಿಗಳನ್ನು ಸೂಚಿಸುವುದು. ಜೀವನದ ಸರ್ವಾಂಗೀನ ಸ್ವರೂಪವನ್ನು ಮಹಾನೈವೇದ್ಯದಂತೆ ( ಈಶಪ್ರಸಾದವೆಂದು ) ಸ್ವೀಕರಿಸುವುದಕ್ಕೆ ದಂಪತಿಗಳು ದೀಕ್ಷೆ ಹೊಂದಿದಂತೆಯೇ ಸರಿ.

**ಛಂದಸ್ಸು** :—ತ್ರಿಪದಿ.

**ಶಬ್ದ ಪ್ರಯೋಗಗಳು:—** ಹಂದವ್ವೂರದಾಗ=ಹಂದರದಲ್ಲಿ. ಪುಟ ಮಾಡು=ಹೊತ್ತಿಸು. ಮಾನಾರಿ=ಮಹಾನಾರಿ. ಮಾನಾರಿಗೆ ನಂದಿಯ ಸಂಬಂಧವೇನೋ ನಮಗ ತಿಳಿಯದು. ಛಳಿಕೊಟ್ಟು=ಸಿಂಪಡಿಸಿ. ಛಜ್ಜಕ=ಸಜ್ಜಿಗೆ. ಮಾನ=ಒಂದು ಅಳತೆ. ಚಾಲಿ=ಮೆಳೆ? ಹಾಳಾಗ=ಹಾಳುನೆಲದಲ್ಲಿ. ಮಡ್ಡಿ=ಮೊರಡಿ ಭೂಮಿ. ಎರಿ=ಕರಿನೆಲ. ಎಸೆ=ವಾಸನೆ ಹಬ್ಬು. ಶಾಂವಿಗಿ, ಕುರುಡಿ=ಊಟದ ಪದಾರ್ಥಗಳು. ಕೊನೆಯ ನುಡಿಗಳಲ್ಲಿ ಬರುವ ಸೋಲು ಗೆಲವುಗಳು ಊಟಕ್ಕೆ ಸಂಬಂಧಿಸಿವೆ. ನೀರಮುಗಿ=ಕೈತೊಳೆದುಕೋ.

---

# ಬೀಗರ ಹಾಡು

"ಹೊಳೆ ದಾಟದ ಮೇಲೆ ಅಂಬಿಗರ ಮಿಂಡ" ಎನ್ನುವಂತೆ, ಲಗ್ನದ ಮುಖ್ಯ ವಿಧಾನಗಳೆಲ್ಲ ಮುಗಿದ ಮೇಲೆ, ಮದುಮಕ್ಕಳ ಮೆರವಣಿಗೆ ಹೊರಟ ಕಾಲಕ್ಕೆ, ಬೀದಿಯಲ್ಲಿ ಎರಡೂ ಕಡೆಯ ಬೀಗರ ಪಕ್ಷದಿಂದ ಹೆಣ್ಣುಮಕ್ಕಳು ಎರಡು ತಂಡಗಳಾಗಿ ಒಬ್ಬರನ್ನೊಬ್ಬರು ಅಪಹಾಸ್ಯಮಾಡುತ್ತಾರೆ. ಅದರ ಮೂಲಕ ಆಗಿನ ಮಟ್ಟಿಗೆ ಕದನಗಳೂ ಆಗುತ್ತವೆ. ನಮಗೇನೋ ಇಂತಹ ಮಾತು ಅಸಹ್ಯಕರವಾಗಿ ಕಾಣುವುದು ಸಹಜ. ಆದರೆ ಜೀವನದ ಸರ್ವ ಅಂಗಗಳನ್ನೂ ಒಳಗೊಂಡ 'ಭೂಮಾ'ಪೂಜಕರಾದ ಪ್ರಾಚೀನರು ಈ ತರ ಹದ ನಗೆಚಾಟಿಕೆಗೂ ತಕ್ಕ ಸ್ಥಾನವನ್ನೇ ಕೊಟ್ಟಿದ್ದಾರೆಂದು ತೋರುತ್ತದೆ.

**ಛಂದಸ್ಸು:—** ತ್ರಿಪದಿ.

**ಶಬ್ದ ಪ್ರಯೋಗಗಳು:—**ಸರಕ್ನ ಸರಿತಲ್ಲ=ಕಾರ್ಯವೆಲ್ಲ ಸರಕ್ಕನೆ ಮುಗಿಯಿತಲ್ಲ. ಸುರಪ್ಪ=ಸ್ವರೂಪ. ಭಣವಿ=ಮೇವಿನ ಒಟ್ಟಿಲು. ಬೋಳ್ಹೋರಿ=ಕೊಂಬು ಮುರಿದ ಹೋರಿ. ಹೊರಿಹುಲ್ಲು=ಬಾಚಿಕೊಳ್ಳದ ಮುಂಗುರುಳು. ಗುಳ್ಳ=ಮಂಗಲಸೂತ್ರ. ಕೈಪಾಳಿ=ಹಿಡಿಕೆಯ ಬಟ್ಟಲು. ಎಟ್ಹೊತ್ತಾಯ್ತು=ಎಷ್ಟೋ ಹೊತ್ತಾಯ್ತು. ಕೂಕಂ=ಕುಂಕುಮ.

---

# ಕೂಸು ಒಪ್ಪಿಸುವ ಹಾಡು

ವರನ ತಾಯಿತಂದೆಗಳಿಗೆ ಸರ್ವಜನಸಾಕ್ಷಿಯಾಗಿ ವಧುವಿನ ತಾಯಿತಂದೆಗಳು ಮಗಳನ್ನು ಒಪ್ಪಿಸಿಕೊಡುವರು. ಮದುವೆಯ ವಿಧಾನಗಳಲ್ಲಿ ಇದು ಕೊನೆಯದು. ಆ ಸಮಯದಲ್ಲಿ ಹೆಣ್ಣುಮಕ್ಕಳು ಈ ಹಾಡನ್ನು ಹಾಡುತ್ತಿರುತ್ತಾರೆ. ಆಗ ಕಣ್ಣೀರು ಸುರಿಸದೆ ಒಬ್ಬರೂ ಉಳಿಯಲಾರರು. ಇದೊಂದು 'ಮಹಾ ಭಾವಗೀತ.' ಹುಟ್ಟಿದ ಮನೆಯಿಂದ ಹೆಣ್ಣುಮಕ್ಕಳನ್ನು ಹೊರಗೆ ನೂಕುವಂತಿರುವ ಈ ಲಗ್ನವೆಂಬುದರ ಸತ್ಯಸ್ವರೂಪವು ಆಗ ಒಡೆದು ಕಾಣುತ್ತಿರುತ್ತದೆ. ಈ ಹೆಣ್ಣು ಒಪ್ಪಿಸುವ ವಿಧಾನಕ್ಕೆ 'ನಾಗೋಲಿ ಚೌಗೋಲಿ' ಎಂದು ಹೆಸರಿದೆ. ಈ ವಿಧಾನ ಮುಗಿದ ಬಳಿಕ ಬೀಗರು ಮದುವೆಯ ಮನೆಯಲ್ಲಿ ನೀರು ಸಹ ಕುಡಿಯದೆ ತಮ್ಮ ಊರ ಹಾದಿಯನ್ನು ಹಿಡಿಯುತ್ತಾರೆ. ಆದ್ದರಿಂದ 'ನಾಗೋಲಿ ಚೌಗೋಲಿ' ಎಂಬುದರ ಅರ್ಥವು 'ನಾಗಾಲ ಚೌಗಾಲ' (ನಾಗಾಲೋಟ) ಎಂದು ಇರಬಹುದು. "'ನಾಗೋಲಿ ಚೌಗೋಲಿ' ಆದ ಬಳಿಕ ನಾಯಿ ಸಹ ನೀರು ಕುಡಿಯುವುದಿಲ್ಲ" ಎಂದು ಗಾದೆಯ ಮಾತಿದೆ.

**ಛಂದಸ್ಸು:**— ತ್ರಿಪದಿಯಾಗಿದೆ.

**ಶಬ್ದಪ್ರಯೋಗಗಳು:**— ಹರಿಯಾಗ=ಬೆಳಗಿಗೆ. ಹಾಲಾಬಾನ=ಹಾಲೂಅನ್ನ. ಬೆಳಗಾಕ=ಉಜ್ಜುವುದಕ್ಕೆ; ತೊಳೆಯುವುದಕ್ಕೆ. ನೆಂಬಿ=ನಂಬಿ. ಬಳಗಾದ=ಬಳಗವಿದೆ. ಮಾನ್ಯದ ಹೊಲ=ಉಂಬಳಿಯ ಹೊಲ. ಒಮ್ಮನ=ನಾಲ್ಕು ಸೇರು. ಹಂತೀಲಿ=ಹತ್ತರ. ಬಣ್ಣ=ಸೀರೆ. ತಳವಲ=ತಳಿರು ತೋರಣ. ಖಿಸಿ=ಕುಕ್ಕು.

# ಸೋಬಾನದ ಹಾಡುಗಳು

ಮಾನವದೇಹದಲ್ಲಿ ಪೂರ್ಣಸೌಂದರ್ಯವು ಪ್ರಕಟವಾಗುವ ಕಾಲಗಳು ಎರಡು. ಒಮ್ಮೆ ಎಳಗೂಸಿದ್ದಾಗ, ಇನ್ನೊಮ್ಮೆ ಪ್ರಾಯವೇರುವಾಗ. ಯೌವನದ ಬೆಡಗು ಶೃಂಗಾರರಸಕ್ಕೆ ಉದ್ದೀಪಕ. ಹೆಣ್ಣಿನ ಶೃಂಗಾರವನ್ನು ಹೆಣ್ಣುಮಕ್ಕಳೇ ಬಣ್ಣಿಸಿದ್ದು ಸೋಬಾನದ ಹಾಡುಗಳಲ್ಲಿ ನೋಡಲಿಕ್ಕೆ ಸಿಗುವಂತಿದೆ. ಶೃಂಗಾರವನ್ನು ನೈಸರ್ಗಿಕವಾಗಿ ಲಜ್ಜಾಶೀಲರಾದ ನಾರಿಯರು ವರ್ಣಿಸಿದ ರೀತಿಗೂ ಸ್ವಚ್ಛಂದತೆಗಾಸ್ಪದವಿರುವ ಪುರುಷರು ವರ್ಣಿಸಿದ ರೀತಿಗೂ ಮಹದಂತರವಿರುತ್ತದೆ. ಲಾವಣಿಯೊಳಗಿನ ಶೃಂಗಾರಕ್ಕೂ ಸೋಬಾನದ ಹಾಡುಗಳೊಳಗಿನ ಶೃಂಗಾರಕ್ಕೂ ಸರಿಹಚ್ಚಿ ನೋಡಿದರೆ ನಮ್ಮ ಈ ಅಭಿಪ್ರಾಯವು ಸ್ಪಷ್ಟವಾಗುವುದು. ಕವಿಚರಿತ್ರೆಯಲ್ಲಿ ಬಂದ ಕುಮಾರವ್ಯಾಸನ ದ್ರೌಪದಿಯ ಚೆಲುವಿಕೆಯ ವರ್ಣನೆಗೂ ರಾಜಶೇಖರವಿಳಾಸ ಮುಂತಾದ ಕಾವ್ಯಗಳೊಳಗಿನ ವೇಶ್ಯೆಯರ ವರ್ಣನೆಗೂ ಇರುವ ವ್ಯತ್ಯಾಸವನ್ನು ಲಕ್ಷ್ಯಕ್ಕೆ ತಂದುಕೊಂಡರೆ ಮೇಲ್ಕಂಡ ನಮ್ಮ ಮಾತಿನ ಭಾವವು ಇನ್ನಿಷ್ಟು ಸ್ಫುಟವಾಗುವುದು.

ಹೆಣ್ಣುಮಕ್ಕಳು ವರ್ಣಿಸಿದ ಶೃಂಗಾರದಲ್ಲಿ ಒಂದು ಸಹಜವಾದ ಜೋಕೆಯಿದೆ. ಗಂಡಸರ ಹಾಡುಗಳಲ್ಲಿ ರೂಪವರ್ಣನೆಯು ಮೂರು ವಿಧದಲ್ಲಿ ಮಾಡಲ್ಪಟ್ಟಿದೆ. " ಮನಸ ಜೈನರ ಮಡದಿ " ಎಂಬ ಈ ಹಾಡಿನಲ್ಲಿ ಇಡೀ ಯೌವನಕ್ಕೆ ಸಂಬಂಧವಾಗುವ ಉಪಮೆಗಳಿವೆ. ಇದು ಒಂದು ವಿಧ. "ಹಿಂಬಳಿ ಮುಂಬಳಿ" ಮತ್ತು " ರನ್ನದುಡಿಗುಣಿ " ಎಂಬೆರಡು ಹಾಡುಗಳಲ್ಲಿ ಮೈಮೇಲಿನ ಅಲಂಕಾರಗಳ ವರ್ಣನೆಯಿಂದ ಶೃಂಗಾರಕ್ಕೆ ಬಣ್ಣಕೊಡಲು ಯತ್ನಿಸಲಾಗಿದೆ. ಇದು ಎರಡನೆಯ ವಿಧ. ಇನ್ನು " ಹಸುಮಗಳಃ ನೀಲಮ್ಮ " ಮತ್ತು " ಹಣಿ ಎಂಬು ಭಾಂವಕ " ಎಂಬೆರಡು ಹಾಡುಗಳಲ್ಲಿ " ಅಕ್ಕ ಭಾವಃಗ ವರನಂದ " " ನಾರೀಗಿ ತಮಗ ವರನಂದ " ಮುಂತಾದ ಮಾ

ಗಳಿಂದ ಪರ್ಯಾಯದಿಂದ ರೂಪವನ್ನು ವರ್ಣಿಸಿದಂತಿದೆ. ಇದು ಮೂರನೆಯ ವಿಧ.

"ಬಾಲಿ ತಾ ಮೈನೆರದು" ಎಂಬ ಹಾಡಿನ ಮೊದಲಿನ ನಾಲ್ಕು ನುಡಿಗಳಲ್ಲಿ ಋತುಸಮಯದ ತಾತ್ಕಾಲಿಕ ಮುಖಲಕ್ಷಣ ಮುಂತಾದವುಗಳ ಸೊಗಸಾದ ವರ್ಣನೆಯಿದೆ. ಇದು ನಾಲ್ಕನೆಯ ವಿಧವೆಂದು ಹೇಳಬಹುದು.

## "ಮನಸ ಜೈನರ ಮಡದಿ"

ಈ ಹಾಡಿನಲ್ಲಿ ಮೊದಲಿನಿಂದ ಕೊನೆಯ ವರೆಗೆ ಒಂದೇ ಸಂದರ್ಭದ ವರ್ಣನೆಯಿರುವುದರಿಂದ ತಿಳಿದುಕೊಳ್ಳಲಿಕ್ಕೆ ನಡುವೆ ಎಲ್ಲಿಯೂ ತೊಂದರೆ ಬರುವಂತಿಲ್ಲ.

**ಛಂದಸ್ಸು** :—ಮಂದಾನಿಲರಗಳೆಗೆ ಸಮೀಪವಾಗಿದೆ.

**ಶಬ್ದಪ್ರಯೋಗಗಳು** :—ಮನಸ ಜೈನರು=ಹಿಂದಕ್ಕೆ ಬಹಳ ಘನವಂತಿಕೆಯಿದ್ದ ಒಂದು ಜಾತಿ. ಗಂಬಿರಳ=ಗಂಭೀರಳು. ಸೋಗಿನ=ಒಯ್ಯಾರದ. ಇಗತಿ=ಯುಕ್ತಿಯುಳ್ಳವಳು. ಜೂಜ=ಪಂಧಗಾರ್ತಿ. ಹಸಿಂಯ ಜಗಲಿ=ಲಗ್ನ-ಫಲಶೋಭನಗಳ ಪೀಠ. ನಾಗೀಂದ್ರನ ಅರಗಲ್ಲ=ಹಾವಿನ ಹೆಡೆಯೊಳಗಿನ ಮಣಿ. ಅರಗಲ್ಲು=ಅರಸುಗಲ್ಲು (ರತ್ನ). ಕಲ್ಪ=ತಲ್ಪ (?) ಮಾಣಿಕದಾಗಿನ ಏಣ, ಭಂಗರದಾಗಿನ ಭರಣಿ=ಮಾಣಿಕದ ಏಣು, ಭಂಗಾರದ ಭರಣಿ.

---

## "ಹಿಂಬಳಿ ಮುಂಬಳಿ"

ಈ ಹಾಡಿನಲ್ಲಿ ಮೊದಲಿನ ಎರಡು ನುಡಿಗಳಲ್ಲಿ ಕನ್ನೆಯ ಅಲಂಕಾರ ವರ್ಣನೆಯಿದೆ. ಮೂರನೆಯ ನುಡಿಯಲ್ಲಿ ವರನ ಘನವಂತಿಕೆಯನ್ನು ಹೇಳಿದೆ. ನಾಲ್ಕನೆಯ ಮತ್ತು ಐದನೆಯ ನುಡಿಗಳಲ್ಲಿ ಕನ್ನೆಯನ್ನು ಗೆಳತಿಯರು ಪನ್ನಿಸುತ್ತಾರೆ.

ಛಂದಸ್ಸು :—ಮಂದಾನಿಲ ರಗಳೆ.

ಶಬ್ದಪ್ರಯೋಗಗಳು :—ಗಿರಾಕಿ=ಹರದಿ (ಸುಂದರಿ). ವಾನ್ಯಾಡು ತುರಬ=ಅಲೆದಾಡುವ ಮುಡಿ. ವನಪಿಲೆ=ಒಯ್ಯಾರದಿಂದ. ಖನ್ನಿ=ಕನ್ನೆ. ಚಿತ್ತ ಬಲ್ಲಬೊ=ಚಿತ್ತವಲ್ಲಭ (ಪ್ರಿಯ). ನಿಲಗುದರಿ=ನಿಲುವಿಕೆಯುಳ್ಳ ಕುದುರೆ. ಮದನಾರಿ=ಯೌವನೆ. ಸದರ=ಸರಿಗದ್ದುಗೆ. ಇಂಜನ ಮಳಿಯ ಗಂಧದ ಗೀರ=ಭೋರಮಳೆಯ ಹನಿಯ ಧಾರೆಗಳಂತೆ ಒಪ್ಪುವ ಗಂಧದ ಗೀರುಗಳು (ಕೈಗೆ).

---

## " ರನ್ನ ದುಡುಗುಣಿ "

ಈ ಹಾಡಿನಲ್ಲಿ ವಸ್ತ್ರಾಭರಣಗಳ ವರ್ಣನೆಯಿದೆ.

ಛಂದಸ್ಸು :—ಮಂದಾನಿಲ ರಗಳೆ.

ಶಬ್ದಪ್ರಯೋಗಗಳು :—ಇಟ್ಟೆದಳ=ಇಟ್ಟಿದ್ದಾಳೆ. ಎಣಿಕಿನಿಲ್ಲದೆ=ಎಣಿಕೆ ಇಲ್ಲದೆ. ಹಸ್ಯಾ ಮಾಡಿ=ಹಾಸ್ಯ ಮಾಡಿ. ದಿಮಿದಿಮಿಗಾರಳ=ತುಂಬು ಮೈಯವಳು. ವಾರಳು=ಓರಣವುಳ್ಳವಳು. ಕಂಡುಸಿ=ಖಂಡಿತವಾಗಿ. ಧನೂರ ಬಣ್ಣ=ಧನ್ನೂರಿನ ಸೀರೆ.

" ಬಸವೇಸೂರನ ಮಡದಿ." ಇಲ್ಲಿ ವರನನ್ನು ಬಸವೇಶ್ವರನಿಗೆ ಹೋಲಿಸಿದೆ. ಹೀಗೆ ಇಂತಹ ಹಾಡುಗಳಲ್ಲಿ ಗಂಡಹೆಂಡಿರನ್ನು ಶಿವಪಾರ್ವತಿಯರಿಗೂ ಹರಿ ಲಕ್ಷ್ಮಿಯರಿಗೂ ಹೋಲಿಸುವುದುಂಟು.

---

## " ಬಾಲಿ ತಾ ಮೈನೆರದು "

ಈ ಹಾಡಿನಲ್ಲಿ ಸೊಸೆಯ ಸಲುವಾಗಿ ಮಾವಯ್ಯನು ತೋರಿಸುವ ಅಕ್ಕರತೆಯು ವರ್ಣಿಸಲ್ಪಟ್ಟಿದೆ.

ಛಂದಸ್ಸು:—ತ್ರಿಪದಿ

ಶಬ್ದಪ್ರಯೋಗಗಳು:—ಮಕಬಾಡಿ=ಮುಖವು ಬಾಡಿ. ಬಡಿಗ್ಯಾರು=

ಬಡಗಿಗಳು. ಮೆಲಿ=ಮೀ (ಎರಕೊಳ್ಳು). ಮಡಿಗೋಳ=ಮಡಿಗಳನ್ನು. ದಸಿ ಮಕದ=ಒಳ್ಳೇ ದಶೆಯುಳ್ಳ ಮುಖಾಕೃತಿಯ.

---

## " ಹಣಿಯೆಂಬೊ ಭಾಂವಕ "

ಈ ಹಾಡಿನಲ್ಲಿ ಸತಿಯ ವಿಷಯದಲ್ಲಿ ಪತಿಗಿರುವ ಅಕ್ಕರತೆ ವರ್ಣಿಸಲ್ಪಟ್ಟಿದೆ. ಹಣೆಗೆ ದಂಡೆಯನ್ನು ಕಟ್ಟಿ ನೋಡುತ್ತಾನೆ. ಕೈಗೆ ಕಡಗ, ದ್ವಾರೀ ಮುಂತಾದ ಆಭರಣಗಳನ್ನಿಡಿಸಿ ನೋಡುತ್ತಾನೆ. ಅಷ್ಟಕ್ಕೂ ಸಾಲದೆ ಬಾಸಿಗವನ್ನು ತನ್ನಿರೆನ್ನುತ್ತಾನೆ. ತಂದು ಕೊಟ್ಟವರಿಗೆ ಪಾರಿತೋಷಿಕವನ್ನು ಕೊಡುತ್ತಾನೆ.

**ಛಂದಸ್ಸು:**—ತ್ರಿಪದಿಯ ಪೂರ್ವಾರ್ಧದಂತಿದೆ.

**ಶಬ್ದಪ್ರಯೋಗಗಳು:**—ಭಾಂವಕ್ಕ=ಸ್ಥಾನಕ್ಕೆ. ಗೊನಿ=ಗೊಂಚಲು. ಕೊಡವಿ=ಹಸುಮಗಳು. ತಗತಾರ=ತೆಗೆದುಕೊಂಡು ಬಾರೆ. ನಂದಿಸೋಪಾನ=ಪೂರ್ವಕಾಲದಲ್ಲಿ ಪ್ರಚಾರದಲ್ಲಿದ್ದ ಮೆಟ್ಟಿಲುಗಳ ಸಾಲು. ನಸಲೀಗಿ=ನೊಸಲಿಗೆ (ಹಣೆಗೆ). ಗುಂಡುಗದ್ಯಾಣದ ಹೊಲ=ದುಂಡಗಿನ ಆಕಾರದ ಹೊನ್ನಿನ ನಾಣ್ಯಗಳನ್ನು ಕೊಟ್ಟು ಕೊಂಡ ಹೊಲ.

---

## " ಹಸುಮಗಳS ನೀಲಮ್ಮ "

ಫಲಶೋಭನದ ಸಂಭ್ರಮವು ಇದರಲ್ಲಿ ವರ್ಣಿಸಲ್ಪಟ್ಟಿದೆ.

**ಛಂದಸ್ಸು:**—ತ್ರಿಪದಿ.

**ಶಬ್ದಪ್ರಯೋಗಗಳು:**—ನಸಲಿಮಾರಗ=ನೊಸಲಮಾರ್ಗ (?) ಅರವೊತ್ತಿನ ರಾಣ್ಯಾರ್ಯಾ=ದೊಡ್ಡ ಮನೆತನದ ಮೂಲಕ ಮನೆಗೆಲಸವು ಮುಗಿಯುವುದಕ್ಕೆ ತಡವಾಗುವುದರಿಂದ ಅರವೊತ್ತಿಗೆ ಸರವೊತ್ತಿಗೆ ಊಟ ಮಾಡುವರು. ಎಡ್ಡು=ಎರಡು. ಪಂಕನಲ್ಲಾಡಿ=ಪಕ್ಕಗಳನ್ನು ಅಲುಗಿಸಿ. ಕಂಗನಲ್ಲಾಡಿ=ಗರಿಗಳನ್ನು ಅದುರಿಸಿ. ವರ=ತಕ್ಕ. ಹಕ್ಕಿ ಹಸಿಗೊಯ್ಯ=ಹಕ್ಕಿಗಳಿರಾ ಸೇಸೆ ಎರೆಯಿರಿ. ಕತೀ ನಡಿಸು=ಕಾರ್ಯವನ್ನು ಸಾಗಿಸು.

# ಇತರ ವಿಧಾನಗಳು

ಮದುವೆ ಶೋಭನಗಳ ನಂತರ ಬರುವ ವಿಧಾನದ ಹಾಡುಗಳನ್ನೆಲ್ಲ ಈ ವಿಭಾಗದಲ್ಲಿ ಕೂಡಿಸಬೇಕೆಂದು ನಮ್ಮ ಇಚ್ಛೆ. ಹೆಣ್ಣುಮಕ್ಕಳು ಚೊಚ್ಚಿಲು ಬಸಿರಾದಾಗ ಐದನೆಯ ಇಲ್ಲವೆ ಏಳನೆಯ ತಿಂಗಳಲ್ಲಿ ಒಂದು ವಿಧಾನವು ಜರುಗಿಸಲ್ಪಡುತ್ತದೆ. ಮತ್ತು ಹಡೆದಾಗ ಕೂಸಿಗೆ ನಾಮಕರಣ ಮಾಡುವ ಕಾಲಕ್ಕೆ ಇನ್ನೊಂದು ವಿಧಾನವು ಜರುಗಿಸಲ್ಪಡುತ್ತದೆ. ಬಹುಶಃ ಇಲ್ಲಿಗೆ ವಿಧಾನಗಳೆಲ್ಲ ಮುಗಿದಂತಾಗುವವು.

## ಕುಬಸಾ ಮಾಡೂ ಹಾಡು

ಚೊಚ್ಚಿಲ ಬಸುರಿಗೆ ಐದನೆಯ ಇಲ್ಲವೆ ಏಳನೆಯ ತಿಂಗಳಲ್ಲಿ ಅಕ್ಕರತೆಯಿಂದ ಕುಪ್ಪಸದ ಉಡುಗೊರೆ ಮಾಡುತ್ತಾರೆ ಆಗ ಹೇಳುವ ಹಾಡಿದು. ಇದರಲ್ಲಿ ಬಸುರಿಗೆ ಉಂಟಾಗುವ ಬಗೆಬಗೆಯ ಬಯಕೆಗಳು ಬಣ್ಣಿಸಲ್ಪಟ್ಟಿವೆ.

**ಛಂದಸ್ಸು:**—ತ್ರಿಪದಿಯ ಪೂರ್ವಾರ್ಧ.

**ಶಬ್ದಪ್ರಯೋಗಗಳು:**—ನೆನೆದಂಡಿ=ಮೊಗ್ಗೆಗಳ ದಂಡೆ. ಆರಾಕು=ಆರಲಿಕ್ಕೆ ಹಾಕು. ಕಂಟಲಿ ಎತ್ತು=ಮುಟ್ಟುಹಾಕಿದ ಎತ್ತು.

**ಶಬ್ದಪ್ರಯೋಗಗಳು:**—ಇಸ=ವಿಷ. ದುಮ್ಮಸ ಮಾಡ=ಅದರಲ್ಲಿ ಅಡಿಗೆ ಮಾಡು. ಮಸರ=ಮೊಸರು. ಬಾನ=ಬೋನ. ತನುಗಾಳಿ=ತಂಪುಗಾಳಿ.

---

## ಬಯಕೆಯ ಹಾಡು

ಒಬ್ಬ ಗರ್ಭಿಣಿಗೆ ಬಯಕೆಗಳು ಕಾಡುತ್ತವೆ. ಅವಳು ತಾಯಿಯಲ್ಲಿ ತನ್ನ ಬಯಕೆಗಳನ್ನೆಲ್ಲ ಬೇಡುತ್ತಾಳೆ. ಅವಳ ಸಲಿಗೆಯ ಮಾತು, ಹೇಳುವ ಬಗೆ ಎಷ್ಟು ಸೊಗಸಾಗಿವೆ: 'ಕಸಕಸಿ ಕೊಬ್ಬರಿ, ಹಸನುಳ್ಳ ಜಿಲಿಬಿಲಿ, ಬಿಳಿಯ

ಬೆಲ್ಲದ ಬಿಸಿಯ ಹೂರಣಗಡುಬು....ಇವನ್ನು ಮುಂದಿಟ್ಟರೆ ಇಸಮಾಡಿ ಒಂದು ತುತ್ತ ತಿಂದೇನು' ಎನ್ನುತ್ತಾಳೆ! ಇದರಂತೆಯೆ 'ಬಟ್ಟಿದ್ದಿ ಬಾಯಾಗ ಇಟ್ಟೇನು ತಾಯಿ' 'ತಾಳಲಾರೆನೆ ತಾಯಿ ತೋಳಾರೆ ತಾರ' --ಮೊದಲಾದುವು.

**ಛಂದಸ್ಸು**:—ಕುಸುಮಷಟ್ಪದಿಗೆ ಹೊಂದುತ್ತದೆ.

---

# ಬೇನೆ ತಿನ್ನುವ ಹಾಡು

**ಶಬ್ದಪ್ರಯೋಗಗಳು** :—ಒಡಿಗಾಯಿ ಹಿಡಿಗಾಯಿ=ಹರಕೆ. ಓಕರಿಕೆ ಹುಟ್ಟಿಸುವುದಕ್ಕೆ ತುರುಬಿನ ಕೂದಲನ್ನು ಬಾಯೊಳಗೆ ಇಡುವರು.

---

# ತೊಟ್ಟಿಲಲ್ಲಿ ಹಾಕುವ ಹಾಡು

ಹುಟ್ಟಿದ ಹನ್ನೆರಡನೆಯ ದಿನ ಕೂಸನ್ನು ತೊಟ್ಟಿಲಲ್ಲಿ ಹಾಕಿ ಹೆಸರಿಡುತ್ತಾರೆ. ಆಗ ಜೋಗುಳಹಾಡನ್ನು ಹಾಡುತ್ತಾರೆ. ಇಲ್ಲಿ ಕೊಟ್ಟಿರುವುದನ್ನು ಆ ಸಮಯದಲ್ಲಿ ಹಾಡುವರಾದರೂ ನಿತ್ಯಶಃ ಕೂಸನ್ನು ತೂಗುವಾಗ ಹೇಳಲಾಗುವಂತೆ ಇದರಲ್ಲಿಯ ವರ್ಣನೆಯ ವಿವರಗಳಿವೆ.

**ಶಬ್ದಪ್ರಯೋಗಗಳು** :—ಸಿಂದಿಗಿ=ಒಂದು ಊರು. ತಳ=ಸ್ಥಳ. ಸಾದ=ಕಪ್ಪು. ಬಿಂದೂಲಿ=ಮುಂಗೈಯ ಆಭರಣ. ನೆಳ=ನೆರಳು. ಅದರಂಗ =ಅದರಂತಹದನ್ನು.

---

# ಅತ್ತೆಮನೆಯ ಕಾಟ

ಅತ್ತೆಯ ಮನೆಯಲ್ಲಿ ಸೊಸೆಗೆ ಅಲ್ಲಿಯ ಹೆಣ್ಣುಮಕ್ಕಳಿಂದುವರಾರಿಂದಲೂ ಸುಖವಿರುವುದಿಲ್ಲ. ಅತ್ತೆ ಸೊಸೆಯರ ಕದನದ ವಿಷಯವಂತೂ ಸರ್ವಶ್ರುತವೇ ಇದೆ. ಅಲ್ಲದೆ ಗಂಡನ ಅಕ್ಕತಂಗಿಯರು ತಮ್ಮ ತಾಯಿಯ ಪಕ್ಷವನ್ನು ಹಿಡಿದು ಇವಳ ಕೂಡ ಕದನಮಾಡುತ್ತಾರೆ. ಅವಳಿಗೆ ಅಲ್ಲಿ ಆಸರೆಂದರೆ ಗಂಡ ಮತ್ತು ಮಾವ. ಮಾವನಿಗೆ ಸೊಸೆಯಂದಿರ ಮೇಲೆ ಬಲು ಅಕ್ಕರತೆ. ಏಕೆಂದರೆ ಅವರಿಂದ ತನ್ನ ವಂಶದ ಬಳ್ಳಿಯು ಬೆಳೆಯಲಿರುವುದು. ನಲ್ಲನ ಅನುರಾಗವೇನೋ ಸರಿಯೇ ಸರಿ. ಅಂತೂ ಗಂಡಸರ ಆಸರ; ಹೆಂಗಸರ ತ್ರಾಸ. ಆದರೆ ಗಂಡಸರು ಯಾವಾಗಲೂ ಮನೆಯಲ್ಲಿರುವವರಲ್ಲ. ಹೆಂಗಸರು ಮಾತ್ರ ಸದಾ ಬಳಿಯಲ್ಲಿದ್ದು ಕಿಟಿಕಿಟಿ ಮಾಡುವವರು. ಹೀಗಾಗಿ ಎಷ್ಟೋ ಸೊಸೆಯಂದಿರು ಕೆರೆಗಳ ಪಾಲಾಗುವುದುಂಟು. ಇಂತಹ ಪರಿಸ್ಥಿತಿಯಲ್ಲಿ ಅವರಿಗೆ ಏನಾದರೂ ನಾಲ್ಕು ದಿನ ವಿಶ್ರಾಂತಿ ಸಿಕ್ಕಬೇಕಾದರೆ ಅದು ತವರುಮನೆಯಲ್ಲಿಯೆ. ಆದುದರಿಂದಲೇ ಹೆಣ್ಣುಮಕ್ಕಳಿಗೆ ತವರುಮನೆಯವರು ಹಬ್ಬಕ್ಕೆ ಕರೆಯಲು ಬಾರದಿದ್ದರೆ ಬಹಳ ದುಃಖವಾಗುತ್ತದೆ. ಈ ವಿಭಾಗದಲ್ಲಿ ಅತ್ತೆಯ ಮನೆಯ ತ್ರಾಸದ ಮತ್ತು ತವರುಮನೆಯ ಆಸೆಯ ಹಾಡುಗಳನ್ನು ಸಂಗ್ರಹಿಸಿದೆ.

## ಅತ್ತೆ ಸೊಸೆಯರ ಜಗಳ

ಈ ಹಾಡಿನಲ್ಲಿ ಸೊಸೆಯೆಂಬವಳನ್ನು ಅತ್ತೆಯ ಮನೆಯಲ್ಲಿರುವವರು ಯಾವ ಯಾವ ಬಗೆಯಿಂದ ನೋಡುತ್ತಾರೆಂಬುದು ಸ್ಪಷ್ಟವಾಗಿ ಬಣ್ಣಿಸಲ್ಪಟ್ಟದೆ.

**ಛಂದಸ್ಸು** :—ತ್ರಿಪದಿ.

**ಶಬ್ದಪ್ರಯೋಗಗಳು**:—ಮಜ್ಜಿಗೆ ಮಾಡತ್ತೆವ್ವ=ಮಜ್ಜಿಗೆ ಮಾಡುವ ಅತ್ತೆವ್ವಾ. ಭಗ್ಗೆ=ಭಾಗ್ಯ. ಹಾಲೀ ಹರಕೊ=ಹಾಳೀ ಹರಕೊ. ಜತ್ತೆನ್ಲೆ =

ಜೋಪಾನವಾಗಿ. ಮೇಲುಪ್ರಿ=ಮೇಲುಪ್ಪರಿಗೆ ಹಾದಿ ಸೋಬುತಿ=ಹಾದೀ ಪಾಲು.

---

## "ಶಾಂವಕ್ಕಿ ಕುಟ್ಟೆಂದ್ರ"

ಈ ಹಾಡಿನಲ್ಲಿ ನಾದುನಿಯು (ಗಂಡನ ತಂಗಿ) ಸೊಗಸಿನ ಸಂಸಾರಕ್ಕೆ ಹೇಗೆ ಮುಳುವಾಗುವಳೆಂಬುದು ತೋರಿಸಲ್ಪಟ್ಟಿದೆ. "ನಡಿಯುವ ಹೆಣ್ಣಿಗೆ ನಾದುನಿ ಮೂಲ" ಎಂಬ ಗಾದೆಯ ಮಾತಿಗೆ ಈ ಹಾಡು ತಕ್ಕ ದೃಷ್ಟಾಂತವಾಗಿದೆ. ಅವಳು ಅಣ್ಣನ ಅಂತಃಕರಣವನ್ನು ಹಿಂಡಿ ಹಿಪ್ಪಿಮಾಡಿ ಒಗೆತನ ಹರಿಸುವುದಕ್ಕೆ ಹೇಗೆ ಆಟ ಹೂಡುತ್ತಾಳೆಂಬುದನ್ನು ನಾವು ಇಲ್ಲಿ ಸ್ಪಷ್ಟವಾಗಿ ಕಂಡುಕೊಳ್ಳುವೆವು ಈ ಹಾಡು ಒಂದು ಕಥೆಯಂತಿದೆ.

**ಛಂದಸ್ಸು:**— ತ್ರಿಪದಿಯ ಪೂರ್ವಾರ್ಧ

**ಶಬ್ದ ಪ್ರಯೋಗಗಳು:**—ಶಾಂವಕ್ಕಿ=ಶಾಂವಿ ಎಂಬ ಒಂದು ತರದ ಧಾನ್ಯ. ಧಸಿಸು=ಅಕ್ಕಿ ಕುಟ್ಟು ಚಿಟಿಚಿಟಿ=ಕರಕರೆ ಹೋಂತೂಟ್ಲೆ=ಹೊತ್ತಿರುವುದರೊಳಗಾಗಿ (ಹೊತ್ತುಂಟಲೆ) ಇಟ್ಟು=ಇಷ್ಟು

---

# ಹಾಸ್ಯದ ಹಾಡುಗಳು

ಮದುವೆಯ ಕಾಲದಲ್ಲಿ ಉಪಯೋಗಿಸುವ ಬೀಗರ ಹಾಡುಗಳು **ಕೂಡ** ಹಾಸ್ಯದವೇ. ಆದರೆ ಅವುಗಳಲ್ಲಿರುವುದು ಅಪಹಾಸ್ಯ. ಈ ವಿಭಾಗದಲ್ಲಿರುವವು ಅಂತಹವಲ್ಲ. ಇವು ನಕ್ಕು ನಗಿಸುವಂತಹವು. ಎರಡನೆಯ ವಿಭಾಗದೊಳಗಿನ ಹಾಡುಗಳಲ್ಲಿಯೂ ಒಂದು ಬಗೆಯ ಹಾಸ್ಯವಿದ್ದದ್ದು ನಿಜ. ಆದರೆ ಅದೂ ಇಂತಹದಲ್ಲ. ಅದಕ್ಕೆ ಸರಸವೆಂದು ಹೇಳಬಹುದು. ಆ ಪರಿಹಾಸ-ಅಪಹಾಸಗಳಿಗಿಂತ ಭಿನ್ನವಾದ ಅಟ್ಟಹಾಸವು ಈ ವಿಭಾಗದಲ್ಲಿ ನಿರೂಪಿತವಾಗಿದೆ.

## ' ನೂಲೊಲ್ಯಾಕ ಚೆನ್ನೀ '

ಈ ಹಾಡಿನ ಭಾವ ಸರಳವಿದೆ.

**ಶಬ್ದಪ್ರಯೋಗಗಳು**:— ಚಿಲ್ಲ=ಕದರುಹಾಕುವ ಕಿವಿ (ಚರ್ಮದ್ದು). ಹಮ್ಮಿಗಿ=ಚಕ್ರಕ್ಕೆ ಸುತ್ತುವ ದಾರ. ನಡುವಿನ=ಸೊಂಟದಲ್ಲಿರುವ. ಗುಗ್ಗರಿ=ತಿನ್ನುವುದಕ್ಕೆಂದು ಕುದಿಸಿದ ಕಾಳುಗಳು.

---

## ಕಿವುಡರ ಹಾಡು

ಗಂಡ, ಹೆಂಡತಿ, ಅತ್ತೆ ಎಲ್ಲರೂ ಕಿವುಡರು. ಒಬ್ಬರು ಒಂದು ಕೇಳಿದರೆ ಇನ್ನೊಬ್ಬರು ಇನ್ನೊಂದು ಹೇಳುತ್ತಾರೆ. ಮೊದಲು ಸೊಸೆಗೆ ದಾರಿಕಾರನೊಬ್ಬನು ಹಾದಿಯನ್ನು ವಿಚಾರಿಸುವನು. ಇಲ್ಲಿಂದ ಮುಂದೆ ಒಬ್ಬೊಬ್ಬರ ಅಸಂಬದ್ಧ ಪ್ರಲಾಪಕ್ಕೆ ಆರಂಭ.

**ಛಂದಸ್ಸು**:—ತ್ರಿಪದಿಯ ಪೂರ್ವಾರ್ಧ.

**ಶಬ್ದಪ್ರಯೋಗಗಳು**:—ಭಾರಿಗೆ ಮತ್ತು ಮೂಳ=ಬೈಗುಳುಗಳು.

---

# ಜೀನನ ಹಾಡು

ಇದೊಂದು ಯಕ್ಷಿಣಿಯ ಕಥೆ. ಜೀನನೊಬ್ಬನು ನೈವೇದ್ಯದ ಸಲುವಾಗಿ ತೀರ ತುಸು ಅಡಿಗೆಯನ್ನು ಮಾಡಿಸಿಕೊಂಡು ಎಳ್ಳಾಮಾಸೀ ದಿನ ಹೊಲಕ್ಕೆ ಹೋದನು. ಆ ಇದ್ದಷ್ಟು ಅಡಿಗೆಯನ್ನು ಗುಬ್ಬಿಕಾಗೆಗಳು ತಿಂದುಬಿಡುವವು. ಮೋರೆ ಒಣಗಿಸಿಕೊಂಡು ಕುಳಿತಿರುವ ಜೀನನ ಮುಂದೆ ಒಬ್ಬ ಯಕ್ಷಿಣಿಯು ಬಂದು 'ನನ್ನ ನೈವೇದ್ಯವನ್ನು ನನಗೆ ಕೊಡು' ಎಂದು ಕೇಳುವಳು. ಹಸಿದು ಹೊಟ್ಟೆ ಉರಿಯುತ್ತಿರುವ ಜೀನನು ಹಸಿದಂಟುಗಳಿಂದ ಅವಳನ್ನು ಚೆನ್ನಾಗಿ ಥಳಿಸಿದನು. ಅವಳು ತನ್ನ ಮಂಗಲದ್ರವ್ಯ (ಅರಿಷಿಣ, ಕುಂಕುಮ, ಕಾಡಿಗೆ, ಗಂಧ) ಗಳನ್ನು ಮಂತ್ರಿಸಿ ಅವನ ಬೆಳೆಗಳ ಮೇಲೆ ತೂರುವಳು. ಅದರಿಂದ ಆ ಬೆಳೆಗಳಿಗೆಲ್ಲ ಬಗೆಬಗೆಯ ರೋಗಗಳುಂಟಾಗಿ ಅವೆಲ್ಲವೂ ಕೆಟ್ಟುಹೋಗುತ್ತವೆ.

**ಛಂದಸ್ಸು**:—ಮಂದಾನಿಲ ರಗಳೆಗೆ ಸಮೀಪವಾಗಿದೆ.

**ಶಬ್ದಪ್ರಯೋಗಗಳು**:—ಅದ್ನಗಿದ್ನ=ಅರ್ಧ ಸೇರು, ಗಿರ್ಧ ಸೇರು. ಕುಳ್ಯಾಗ=ಚಿಕ್ಕ ಮಡಿಕೆಯಲ್ಲಿ. ಛರಗ=ಅಡವಿಯ ನೈವೇದ್ಯ ಅಂಟಿ=ಮಂಚಿಕೆ. ಎಲ್ಲ=ಎಲ್ಲಮ್ಮ (ದೇವತೆ). ಬತ್ತಗಾಡಿಗೆ=ಜೋಳದ ತೆನೆಗಳಿಗೆ ಬೀಳುವ ಕಾಡಿಗೆರೋಗ. ಬಂಜಿ=ಹತ್ತಿಯ ಕಾಯಿಗಳಿಗೆ ಬೀಳುವ ರೋಗ. ಸೊಳ್ಳು ಹಾಯಿ=ಗೋದಿಯ ಬೆಳೆಯ ಮೇಲೆ ಇಟ್ಟಂಗಿಯಂತಹ ರೋಗ ಬೀಳುವುದರಿಂದ ಬೆಳೆಯೆಲ್ಲ ಸೊಳ್ಳಾಗುತ್ತದೆ. ಕೊಳ್ಳಿ=ಕಡಲೆಯಗಿಡಗಳನ್ನು ಒಣಗಿಸುವ ಕೆಂಪು ರೋಗ.

---

# ಮಂಗ್ಯಾನ ಹಾಡು

ಕೋತಿಗಳಿರುವ ಊರಲ್ಲಿ ನಡೆಯುವ ವಿಚಿತ್ರವು ಈ ಹಾಡಿನಲ್ಲಿ ವರ್ಣಿಸಲ್ಪಟ್ಟಿದೆ.

**ಛಂದಸ್ಸು**:—ಮಂದಾನಿಲರಗಳೆ.

**ಶಬ್ದಪ್ರಯೋಗಗಳು**:— ಶಾರ=ಪಟ್ಟಣ. ಮಂಗ್ಯಾ=ಕೋತಿ. ಮಿಕ-ಮೃಗ ಕಾಳಕಡಿ=ದವಸಧಾನ್ಯ. ಬಂದೈತಿ=ಬಂದಿದೆ. ಆಣಿ=ಬೆಲ್ಲದ ಪಾಕ. ಕಟ್ಟಿಕೇರಿ=ಕಟ್ಟಿಬಿಟ್ಟು ಬೆಳಬಿಂಡಿ=ಬೆಳಕಿನ ಕಿಂಡಿ ಇದ್ದಾಸು=ಇದ್ದಷ್ಟು. ಹಾಸ=ನೂಲು ತೋಡುವ ಕಟ್ಟಿಗೆ ಹುಂಜ=ನೂಲಿನ ಉಡಿ. ಒಳಕು=ನೆನಪು ಮಾಡಿಕೊಂ (?) ಆಕಿ=ಆಕೆ. ಯಾಳಿ=ವೇಳೆ. ನೆಪ್ಪು=ನೆನಪು. ಕೊನೆಯ ಸುಡಿಯು ಮುದ್ರಿಕೆಯಂತೆ ಇದೆ

